**ವಂಶಸ್ಯಾದೀನ್ ಸನಕಾದೀನುಪಾಸ್ಯೇ ।**
**ದೂರ್ವಾಸಸಂ ಪರತೀರ್ಥಾಖ್ಯಭಿಕ್ಷುಮ್ ।**
**ಸತ್ಯಪ್ರಜ್ಞಂ ಪ್ರಾಜ್ಞತೀರ್ಥಂ ಯತೀಂದ್ರಮ್ ।**
**ಪಶ್ಚಾಚ್ಛಿಷ್ಯಾವಚ್ಯುತಪ್ರೇಕ್ಷಮಧ್ವೌ ॥೯॥**

ಸ. ಅ :- ಋಷಿ ಪೀಳಗೆಗೆ ಮೊದಲಿಗರಾದ ಸನಕಾದಿಗಳನ್ನು ಸೇವಿಸುತ್ತೇನೆ. ದೂರ್ವಾಸರನ್ನೂ, ಪರತೀರ್ಥರೆಂಬ ಹೆಸರಿನ ಭಿಕ್ಷುಗಳನ್ನೂ, ಸತ್ಯಪ್ರಜ್ಞರನ್ನೂ, ಪ್ರಾಜ್ಞತೀರ್ಥರೆಂಬ ಯತಿಶ್ರೇಷ್ಠರನ್ನೂ, ಅನಂತರ ಶಿಷ್ಯರುಗಳಾದ ಅಚ್ಯುತ ಪ್ರೇಕ್ಷರು ಮತ್ತು ಮಧ್ವರನ್ನು ಉಪಾಸಿಸುತ್ತೇನೆ.

ವಿ. ವಿ :- ಸನಕ, ಸನತ್ಕುಮಾರ, ಸನತ್ಸುಜಾತ, ಸನನ್ದನ-ಈ ನಾಲ್ವರೂ ಸೃಷ್ಟಿಯ ಆದಿಯಲ್ಲಿ ಬ್ರಹ್ಮನ ಮಾನಸ ಪುತ್ರರಾಗಿ ಹೊರಬಂದವರು. ಇವರಿಗೆ ಯಾವಾಗಲೂ ಕೌಮಾರಾವಸ್ಥೆಯೆ. ಇವರು ಮಹಾ ತಪಸ್ವಿಗಳೂ ಜ್ಞಾನಸಂಪನ್ನರೂ ಆದವರು.

ದೂರ್ವಾಸಸ್ ಎಂಬುವವನು ಒಬ್ಬ ಮಹರ್ಷಿ. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಅತ್ರಿ-ಅನಸೂಯೆಯರ ದ್ವಿತೀಯ ಪುತ್ರನೇ ಈತನು. ಚಂದ್ರ, ದತ್ತಾತ್ರೇಯ ಮತ್ತು ಆರ್ಯಮ ಎಂಬುವರು ಈತನ ಒಡಹುಟ್ಟಿದವರು (ಭಾ. ಶಾಂ.) ಈ ಮೇಲಿನ ಶ್ಲೋಕದಲ್ಲಿ ಮಧ್ವಮತದ ಗುರುಪರಂಪರೆಯನ್ನು ಹೇಳಲಾಗಿದೆ. ಶ್ರೀ ಪುರಂದರದಾಸರು-

ಶ್ರೀಪತಿಯ ನಾಭಿಕಮಲದಿಂದ ಅಜನು ಜನಿಸಿದನು
ಅಜನಮಾನಸ ಪುತ್ರರೆ ಸನಕಾದಿಗಳು
ಸನಕಾದಿಗಳ ಶಿಷ್ಯರೇ ದುರ್ವಾಸರು
ದುರ್ವಾಸ ಶಿಷ್ಯರೇ ಪರತೀರ್ಥರು
ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು
ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞತೀರ್ಥರು
ಪ್ರಾಜ್ಞತೀರ್ಥರ ಶಿಷ್ಯರೇ ಅಚ್ಯುತಪ್ರೇಕ್ಷರು
ಅಚ್ಯುತ ಪ್ರೇಕ್ಷರ ಕರಕಮಲ ಸಂಜಾತರೇ
ಮಹಾಭಾಷ್ಯಕಾರ ಮಧ್ವಾಚಾರ್ಯರು-

ಎಂದು ಮೊದಲಾಗಿ ತಮ್ಮ ದೇವರ ನಾಮದಲ್ಲಿ ಹೇಳಿದ್ದಾರೆ.

**ವಂದೇ ಹೃಷೀಕೇಶ ಮಧೋನೃಸಿಂಹಂ ।**
**ಜನಾರ್ದನಂ ಚಿಂತಯ ಧೀರುಪೇಂದ್ರಮ್ ।**

ಶ್ರೀ ವಾಮನಂ ಸಂಸ್ಮರ ವಿಷ್ಣುಮೇಮಿ ।
ಶ್ರೀರಾಮಮಂಚೇಽಹಮಧೋಕ್ಷಜಂ ಚ ॥೧೦॥

ಸ. ಅ :- ಹೃಷೀಕೇಶನನ್ನು ನಮಸ್ಕರಿಸುತ್ತೇನೆ. ಮತ್ತೆ ನೃಸಿಂಹನನ್ನೂ ಜನಾರ್ದನನನ್ನೂ ಸ್ಮರಿಸುತ್ತೇನೆ. ಎಲೆ ಬುದ್ಧಿಯೆ ಉಪೇಂದ್ರನನ್ನೂ ಶ್ರೀ ವಾಮನನನ್ನೂ ಸ್ಮರಿಸು. (ವಿಷ್ಣುಂ - ಏಮಿ) ವಿಷ್ಣುವನ್ನು ಹೊಂದುತ್ತೇನೆ (ಶ್ರೀರಾಮಂ - ಅಂಚೇ) ಶ್ರೀರಾಮನನ್ನು ಗೌರವಿಸುತ್ತೇನೆ. ಹಾಗೆಯೇ ನಾನು ಅಧೋಕ್ಷಜನನ್ನೂ ಸೇವಿಸುತ್ತೇನೆ.

ವಿ. ವಿ :- ಹೃಷೀಕೇಶಃ- ಹೃಷೀಕಗಳನ್ನು ಇಂದ್ರಿಯಗಳೆನ್ನುವರು. ಆ ಇಂದ್ರಿಯಗಳಿಗೆ ಒಡೆಯನಾಗಿರುವುದರಿಂದ ಕೇಶವನು ಹೃಷಿಕೇಶನೆಂದು ವೇದ ಪ್ರತಿಪಾದ್ಯನಾಗಿದ್ದಾನೆ.

ನೃಸಿಂಹಃ :- ಕತ್ತಿನಿಂದ ಕೆಳಕ್ಕೆ ನರಾಕೃತಿಯೂ, ಮೇಲಕ್ಕೆ ಸಿಂಹಾಕೃತಿಯೂ ಉಳ್ಳ ದೇವನಾದುದರಿಂದಲೂ. ಸರ್ವಭೂತಗಳಲ್ಲೂ ( ಸಿಂಹದಂತೆ ) ವೀರ್‍ಯತಮನೂ, ಶ್ರೇಷ್ಠತಮನೂ ಆಗಿರುವುದರಿಂದಲೂ ನೃಸಿಂಹನು.

ಜನಾರ್ದನಃ-ಜನೈಃ ಪುರುಷಾರ್ಥಂ ಯಾಚ್ಯತ ಇತಿ'

-ಧರ್ಮಾರ್ಥಕಾಮ ಮೋಕ್ಷವೆಂಬ ಪುರುಷಾರ್ಥ ಚತುಷ್ಟಯಗಳು ಅದರಲ್ಲೂ ಮುಖ್ಯವಾದ ಮೋಕ್ಷಸಾಧನರೂಪವಾದ ಕರ್ಮಫಲವನ್ನು ಜನರಿಂದ ಯಾಚಿಸುವ ಸ್ಥಾನಾಪನ್ನನಾಗಿರುವುದರಿಂದಲೂ ದುರ್ಜನಾನ್ ಅರ್ದಯತೀತಿ ದುಷ್ಟರನ್ನು ಶಿಕ್ಷಿಸುವುದರಿಂದಲೂ ಜನಾರ್ದನನು.

ಉಪೇಂದ್ರಃ :-ಇಂದ್ರಮುಪಗತೋ ನುಜತ್ವೇತಿ ಉಪೇಂದ್ರಃ:-ಇಂದ್ರನನ್ನು ಸಹೋದರನನ್ನಾಗಿ ಹೊಂದಿರುವುದರಿಂದ ಉಪೇಂದ್ರನು. ದಿತಿದೇವಿಯ ಹನ್ನೆರಡು ಮಂದಿ ಮಕ್ಕಳಲ್ಲಿ ಕೊನೆಯವನೂ, ಸರ್ವ ಶ್ರೇಷ್ಠನಾಗಿ ಸಮಸ್ತ ಲೋಕಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವವನೂ ಆದುದರಿಂದ ಉಪೇಂದ್ರನು.

ವಾಮನಃ :- ದ್ರಷ್ಟೄಣ್ ಸ್ವಕಾಂತ್ಯಾ ವಾಮಾನಿ (ಸುಖಾನಿ) ನಯತಿ ಇತಿ ವಾಮನಃ' ಎಂದರೆ ಪ್ರೇಕ್ಷಕರಿಗೆ ಸುಂದರವಾದ ತನ್ನ ದಿವ್ಯ ಶರೀರಕಾಂತಿಯಿಂದ ಸುಖವನ್ನು ಕೊಡುವವನಾದುದರಿಂದ, ಬಲಿಯನ್ನು ಬೇಡಲು ವಾಮನರೂಪದಿಂದ ಹೋಗಿದ್ದುದರಿಂದ ವಾಮನನು.

ವಿಷ್ಣುಃ- ವೇವೇಷ್ಟಿ-ವ್ಯಾಪ್ನೋತಿ (ವಿಶಜಾ-ವ್ಯಾಪ್ತೌ) ಇತಿ ವಿಷ್ಣುಃ

ಯಸ್ಮಾದ್ವಿಶ್ವಮಿದಂ ಸರ್ವಂ ತಸ್ಯ ಶಕ್ತ್ಯಾ ಮಹಾತ್ಮನಃ ।

ತಸ್ಮಾದ್ವಿಷ್ಣುರಿತಿಖ್ಯಾತೋ । ವಿಶೇಷಾರ್ಥ ಪ್ರವೇಶನಾತ್ ॥

ಎಂಬಂತೆ ಯಾವ ಮಹಾಪುರುಷನ ಶಕ್ತಿಯೇ ಚರಚರಾತ್ಮಕವಾದ ಪ್ರಪಂಚವೆಲ್ಲದ ರಲ್ಲಿಯೂ ಆವೃತವಾಗಿದೆಯೋ: ವಿ-ಯಚ್ಛ್ತಿ-ದೀಪ್ಯತ ಇತಿ ವಿಷ್ಣುಃ ! ಎಂಬಂತೆ ಯಾವ ವಿಶ್ವರೂಪಿಯ ಕಾಂತಿಯಿಂದ ಬ್ರಹ್ಮಾಂಡವೆಲ್ಲವೂ ಆವೃತವಾಗಿದೆಯೋ ಆತನೇ ವಿಷ್ಣುವು.

ಶ್ರೀರಾಮಃ :-ರಮನ್ತೇ ಯೋಗಿನೋಽನನ್ತೇ ನಿತ್ಯಾನಂದೇ ಚಿದಾತ್ಮನಿ ।
ಇತಿ ರಾಮಪದೇ ನೈತತ್ಪರಂ ಬ್ರಹ್ಮಾಭಿಧೀಯತೇ ॥ ಎಂಬಂತೆ
ನಿತ್ಯಾನಂದವುಳ್ಳವನೂ ಜ್ಞಾನಸ್ವರೂಪನೂ ದೇಶ-ಕಾಲ-ವಸ್ತು ಪರಿಚ್ಛೇದಶೂನ್ಯನೂ ಆದ ಯಾವ ಪರಮಾತ್ಮನಲ್ಲಿ ಯೋಗಿಗಳು ನಿತ್ಯವಾಗಿ ರಮಿಸಿಕೊಂಡಿರುವರೋ ಅಂತಹ ದೇವರು ರಾಮನು. ರಮಣೀಯವಾದ ದಿವ್ಯ ಶರೀರಧಾರಿಯಾಗಿರುವುದರಿಂದಲೂ ರಾಮನು (ದಶರಥನ ಪುತ್ರ).

ಅಧೋಕ್ಷಜಃ ಅಧೋಽನಕ್ಷೀಯತೇ ಜಾತು ಯಸ್ಮಾತ್ತಸ್ಮಾದಧೋಕ್ಷಜಃ ।
ಎಂಬಂತೆ ಸದಾ ನಾಶವಿಲ್ಲದವನು ಆದುದರಿಂದ ಅಧೋಕ್ಷಜನು

**ವಿಮಲ ಸಕಲಗಾತ್ರಂ ಶುದ್ಧ ಕೈವಲ್ಯ ಪಾತ್ರಂ ।**
**ಶುಭಗುಣಗಣ ಸಾಂದ್ರಂ ಭೂಮಿ ಭೂಷಾಮಣೀಂದ್ರಮ್**
**ವಿದಿತ ಸಕಲಶಾಸ್ತ್ರಂ ಸಾಧುಚಿತ್ತಂ ಯತೀಂದ್ರಮ್ ।**
**ತುರಗವದನ ಭಾಜಂ ನೌಮಿ ಸದ್ವಾದಿರಾಜಮ್ ॥೧೧॥**

ಸ. ಅ :- ಪರಿಶುದ್ಧವಾದ ದೇಹವುಳ್ಳವನೂ, ಶುದ್ಧವಾದ ಮೋಕ್ಷಕ್ಕೆ ಪಾತ್ರನೂ, ಒಳ್ಳೆಯ ಗುಣಸಮೂಹದಿಂದ ವ್ಯಾಪ್ತನೂ, ಭೂಮಿಗೆ ಅಲಂಕಾರಪ್ರಾಯ-ವಾದ ರತ್ನದಂತಿರುವವನೂ, ಎಲ್ಲ ಶಾಸ್ತ್ರಗಳನ್ನೂ ಬಲ್ಲವನೂ, ಒಳ್ಳೆಯ ಮನಸ್ಸಿನ ಯತಿಶ್ರೇಷ್ಠನೂ, ಹಯವದನನನ್ನು ಸರಿಗಟ್ಟುವವನೂ, ಆದ ಶ್ರೇಷ್ಠನಾದ ವಾದಿರಾಜನನ್ನು ಸ್ತುತಿಸುತ್ತೇನೆ.

ವಿ. ಓ :- ಸೋದೆಮಠಾಧಿಪತಿಗಳೂ, ಶ್ರೀ ವ್ಯಾಸರಾಯರ ಶಿಷ್ಯರೂ, ೧೨೦ ವರುಷಗಳ ಕಾಲ ಜೀವಿಸಿದ್ದು ಸಶರೀರಬೃಂದಾವನಸ್ಥರೂ ಆದ ಈ ಯತೀಂದ್ರರು, ರುಕ್ಮಿಣೀಶ ವಿಜಯ ತಂತ್ರಸಾರ, ಸ್ವಪ್ನಗದ್ಯ—ಮೊದಲಾದ ಅನೇಕ ಗ್ರಂಥಗಳನ್ನೂ, ದೇವರ ನಾಮಗಳನ್ನೂ ರಚಿಸಿದ್ದಾರೆ.

**ಅಂಜನಾಸೂನುಸಾನ್ನಿಧ್ಯಾತ್ ವಿಜಯೇನ ವಿರಾಜಿತಮ್ ।**
**ಅಜಿತಪ್ರೀತಿಜನಕಂ ಭಜೇಽಹಂ ವಿಜಯಧ್ವಜಮ್ ॥೧೨॥**

ಸ. ಅ :- ಅಂಜನಾದೇವಿಯ ಮಗನ (ಆಂಜನೇಯನ) ಸನ್ನಿಧಿಯ ಪ್ರಭಾವದಿಂದ ಜಯದಿಂದ ಬೆಳಗಿದವರೂ; ಅಜಿತಃ ಎಂದರೆ ಅಜೇಯನಾದ ಶ್ರೀ ಪ್ರಾಣ ದೇವರಿಗೆ ಪ್ರೀತಿಜನಕಂ-ಎಂದರೆ ಪ್ರಿಯವನ್ನು ಉಂಟುಮಾಡುವವರೂ ಆದ ವಿಜಯ ಧ್ವಜರನ್ನು ಭಜಿಸುತ್ತೇನೆ.

ವಿ. ವಿ :- ವಿಜಯಧ್ವಜತೀರ್ಥರು ಉಡುಪಿ ಪೇಜಾವರಮಠಾಧೀಶರಾಗಿದ್ದು ಶ್ರೀ ಮದ್ಭಾಗವತಕ್ಕೆ ಟೀಕೆ ಬರೆದು ಖ್ಯಾತರಾಗಿದ್ದಾರೆ.

**ಚಿತ್ರೈಃ ಪದೈಶ್ಚಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।**
**ಗುರುಭಾವಂ ವ್ಯಂಜಯನ್ತೀ ಭಾತಿ ಶ್ರೀ ಜಯತೀರ್ಥವಾಕ್ ॥೧೩॥**

ಸ. ಅ :- ವಿಚಿತ್ರ ಪದಗಳಿಂದಲೂ, ಗಂಭೀರವಾದ ವಾಕ್ಯಗಳಿಂದಲೂ, ಮಾನನಿಧಿಗಳಿಂದ ಖಂಡಿಸಲ್ಪಡದ ಹಾಗೂ ಗುರುತ್ವವನ್ನು ಪ್ರಕಾಶ ಪಡಿಸುವ ಶ್ರೀ ಜಯತೀರ್ಥರ ವಾಕ್ಯಗಳು (ಸುಧಾದಿಗ್ರಂಥಗಳರೂಪದಲ್ಲಿ) ಬೆಳಗುತ್ತವೆ.

ವಿ. ವಿ :- ಧೋಂಡೂರಘುನಾಥ ಪಂತ್ ಎಂಬ ಹೆಸರಿನ ಮರಾಠಾ ಸೈನಿಕನೀತ. ಮಧ್ವಾಚಾರ್ಯರ ಸರ್ವ ಮೂಲಗ್ರಂಥಗಳನ್ನು ಹೊರುತ್ತಿದ್ದ ಎತ್ತಿನ ಜನ್ಮಾಂತರದ ರೂಪವೀತನದು. ಶ್ರೀ ಮಧ್ವಾಚಾರ್ಯರು ಬೋಧಿಸುತ್ತಲಿದ್ದ ಶಾಸ್ತ್ರಾರ್ಥಗಳನ್ನೆಲ್ಲ ಕೇಳಿ ಜೀರ್ಣಿಸಿಕೊಂಡಿದ್ದ ಹಿಂದಿನ ಸಂಸ್ಕಾರದ ಬಲದಿಂದ ಈತನು ಸುಧಾಗ್ರಂಥವನ್ನು ರಚಿಸಿ ಟೀಕಾಚಾರ್ಯರೆನ್ನಿಸಿಕೊಂಡವರು.

**ಅರ್ಥಿಕಲ್ಪಿತ ಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।**
**ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥ ಸಿದ್ಧಯೇ ॥೧೪॥**

ಸ. ಅ :- ಯಾಚಕರಿಗೆ ಏರ್ಪಟ್ಟ ಕಲ್ಪವೃಕ್ಷದಂತೆಯೂ, ಪ್ರತಿಕಕ್ಷಿಗಳೆಂಬ ಆನೆಗಳಿಗೆ ಸಿಂಹಸ್ವರೂಪರೂ ಆದ ಶ್ರೀ ವ್ಯಾಸತೀರ್ಥ ಗುರುಗಳು ನಮ್ಮೆಲ್ಲರ ಅಭೀಷ್ಟ ಸಿದ್ಧಿಗಾಗಿ ವಿರಾಜಿಸಲಿ.

**ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯಚ ।**
**ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥೧೫॥**

ಸ. ಅ :- ಸತ್ಯ ಹಾಗೂ ಧರ್ಮದಲ್ಲಿ ಆಸಕ್ತರೂ, ಭಜಿಸುವವರಿಗೆ ಕಲ್ಪವೃಕ್ಷ ಸದೃಶರೂ, ನಮಸ್ಕರಿಸುವವರಿಗೆ ಕಾಮಧೇನುವೂ ಆಗಿರುವ ಶ್ರೀ ರಾಘವೇಂದ್ರ ತೀರ್ಥರನ್ನು ನಮಸ್ಕರಿಸುತ್ತೇನೆ.

ವಿ. ವಿ :- ಕಲ್ಪವೃಕ್ಷವೂ, ಕಾಮಧೇನುವೆಂಬ ಹಸುವೂ ದೇವೇಂದ್ರನ ನಂದನವನದಲ್ಲಿವೆ. ಇವು ಬೇಡುವವರ ಇಷ್ಟಾರ್ಥವೆಲ್ಲವನ್ನೂ ಕೊಡುವ ಮಹಿಮೆಯುಳ್ಳವು.

**ವಾದೇ ವಿಜಯಶೀಲಾಯ ವರದಾಯ ವರಾರ್ಥಿನಾಮ್ ।**
**ವದಾನ್ಯಜನಸಿಂಹಾಯ ವರದೇಂದ್ರಾಯ ತೇ ನಮಃ ॥೧೬॥**

ಸ. ಅ :- ವಾದದಲ್ಲಿ ಜಯವನ್ನು ಗಳಿಸುವ, ಅರ್ಥಿಗಳಿಗೆ ವರನೀಡುವ, ವಾಚಾಳಿಗಳಿಗೆ ಸಿಂಹಸದೃಶರಾದ, ವರದೇಂದ್ರ ತೀರ್ಥರಿಗೆ ವಂದನೆ.

ವಿ. ವಿ :- ವರದೇಂದ್ರತೀರ್ಥರು ಶ್ರೀ ರಾಘವೇಂದ್ರಮಠಾಧಿಪತಿಗಳಾಗಿದ್ದ ಯತಿಶ್ರೇಷ್ಠರು.

**ಪುರಂದರಃ ಕಲ್ಪವೃಕ್ಷಃ ವಿಜಯಃ ಕಾಮಧೇನುಕಾ ।**
**ಚಿಂತಾಮಣಿಶ್ಚ ಗೋಪಾಲಃ ತಾಪತ್ರಯ ನಿವಾರಕಃ ॥೧೭॥**

ಸ. ಅ :- ಪುರಂದರದಾಸರು ಕಲ್ಪವೃಕ್ಷದಂತೆ, ವಿಜಯದಾಸರು ಕಾಮಧೇನುವಿನಂತೆ, ತಾಪತ್ರಯಗಳನ್ನು ಹೋಗಲಾಡಿಸುವ ಗೋಪಾಲದಾಸರು ಚಿಂತಾಮಣಿಯಂತೆ.

ವಿ. ವಿ :- ಆಧ್ಯಾತ್ಮಿಕ, ಆಧಿದೈಹಿಕ, ಆಧಿಭೌತಿಕವೆಂಬುವು ಮಾನವನಿಗೆ ಮೂರು ಬಗೆಯ ತಾಪಗಳು.

ಚಿಂತಾಮಣಿ ಎಂಬುದು ಇಷ್ಟಾರ್ಥವನ್ನು ಕೊಡುವ ಸ್ವರ್ಗದಲ್ಲಿರುವ ರತ್ನ.

**ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಂ ।**
**ಜಗತೀತಲ ವಿಖ್ಯಾತಂ ಜಗನ್ನಾಥಗುರುಂ ಭಜೇ ॥೧೮॥**

ಸ. ಅ :- (ಜಲಜ + ಇಷ್ಟ) ತಾವರೆಗೆ ಮಿತ್ರನಾದ ಸೂರ್ಯನಿಗೆ ಸಮನಾದ ಆಕಾರವುಳ್ಳವನೂ (ತೇಜಸ್ಸುಳ್ಳವನೂ) ಜಗಕ್ಕೆ ಒಡೆಯನಾದ ಸ್ವಾಮಿಯ ಚರಣವನ್ನು ಆಶ್ರಯಪಡೆದಿರುವವನೂ, ಪ್ರಪಂಚದಲ್ಲೆಲ್ಲ ಕೀರ್ತಿಯನ್ನು ಗಳಿಸಿರುವವನೂ ಆದ ಜಗನ್ನಾಥ (ದಾಸರೆಂಬ) ಗುರುಗಳನ್ನು ಸೇವಿಸುತ್ತೇನೆ.

**ಗುರುಭಕ್ತಿಮತಾಂ ಶ್ರೇಷ್ಠಂ ಗುರುಪಾದಾವಲಂಬಿನಮ್ ।**
**ಗುರೂಪ ದಿಷ್ಟಮಾರ್ಗಸ್ಥಂ ಶ್ರೀಪ್ರಾಣೇಶಗುರುಂ ಭಜೇ ॥೧೯॥**

ಸ. ಅ :- ಗುರುಭಕ್ತಿಯುಳ್ಳವರಲ್ಲಿ ಶ್ರೇಷ್ಠನೂ, ಗುರುವೇ ಗತಿ ಎಂದು ನಂಬಿದ್ದವನೂ, ಗುರುವು ನಿರ್ದೇಶಿಸಿದ ಮಾರ್ಗದಲ್ಲೇ ಸ್ಥಿರವಾಗಿ ನಿಂತವನೂ ಆದ ಶ್ರೀ ಪ್ರಾಣೇಶವಿಠಲನೆಂಬ ಗುರುವನ್ನು ಭಜಿಸುತ್ತೇನೆ.

ವಿ. ವಿ :- ಯೋಗೀಂದ್ರರಾಯರೆಂಬುವವರು ಜಗನ್ನಾಥದಾಸರ ಪ್ರಮುಖ ಶಿಷ್ಯರು. ದಾಸರು ಶಿಷ್ಯನನ್ನು ಯೋಗಣ್ಣನೆಂದು ಸಂಬೋಧಿಸುತ್ತಿದ್ದರು. ಇವರು ಲಿಂಗಸೂಗೂರು ಎಂಬಲ್ಲಿ ಕುಲಕರಣಿಗಳಾಗಿದ್ದವರು. ಗುರುವಿನಿಂದ ಕೊಡಲ್ಪಟ್ಟ ಅಂಕಿತ 'ಪ್ರಾಣೇಶ ವಿಠಲ' ನೆಂಬುದು. ಪ್ರಾಣೇಶದಾಸರೆಂದೇ ಖ್ಯಾತರಾಗಿದ್ದಾರೆ. ಗುರುಗಳೇ ಸರ್ವಸ್ವ ವೆಂದು ನಂಬಿದ್ದ ಇವರು ಜಗನ್ನಾಥದಾಸರ ಜತೆಯಲ್ಲೇ ಅವರ ಅಂತ್ಯಕಾಲದ ವರೆವಿಗೂ ಇದ್ದು ಸೇವೆ ಸಲ್ಲಿಸುತ್ತಿದ್ದರು. ಇವರೂ ಹಲವಾರು ದೇವರ ನಾಮಗಳನ್ನೂ, ಗಾಲವಚರಿತ್ರೆ, ಕಾಲಿಯ ಮರ್ದನ ಕತೆ ಮೊದಲಾದ ಗ್ರಂಥಗಳನ್ನೂ ರಚಿಸಿದ್ದಾರೆ.

**ಆಪಾದಮೌಳಿ ಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।**
**ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥೨೦॥**

ಸ. ಅ :- ನಖಶಿಖಾಂತ ಗುರುಗಳ ಆಕಾರವನ್ನು ಸ್ಮರಿಸಿಕೊಳ್ಳಬೇಕು. ಇದರಿಂದ ಎಲ್ಲ ಅಡ್ಡಿಗಳೂ ನಿವಾರಣೆಯಾಗುತ್ತವೆ. ಅಪೇಕ್ಷಿಸುವ ಫಲವೂ ಸಿದ್ಧಿಸುವುದು.

ವಿ. ವಿ :- ಆತ್ಮೋದ್ಧಾರಕ್ಕೆ ಮಾನವನಿಗೆ ಗುರು ಅನುಗ್ರಹವು ಅತಿ ಮುಖ್ಯ. 'ಗುರುವಿನ ಗುಲಾ ಮನಾಗುವತನಕ ದೊರೆಯದಣ್ಣ ಮುಕುತಿ' ಎಂದು ಹರಿದಾಸರು ಹಾಡಿದ್ದಾರೆ. 'ಗುರುಲೇಕ ಎಟುವಂಟಿಗುನಿಕಿ ತೆಲಿಯಕ ಬೋನು' ಎಂದು ಶ್ರೀ ತ್ಯಾಗರಾಜರೂ ಹಾಡಿದ್ದಾರೆ.

**ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।**
**ನಮಃ ಪುರಂದರಾರ್ಯಾಯ ವಿಜಯಾಖ್ಯಾಯ ತೇ ನಮಃ ॥೨೧॥**

ಸ. ಅ :- ಶ್ರೀಪಾದರಾಜರಿಗೆ ವಂದನೆ. ವ್ಯಾಸಯೋಗಿಗಳಿಗೆ ನಮಸ್ಕಾರ. ಪುರಂದರ [ದಾಸ] ರೆಂಬ ಪೂಜ್ಯರಿಗೆ ನಮನವು. ವಿಜಯ[ದಾಸ] ರೆಂಬ ಹೆಸರಿನವರಿಗೆ ವಂದನೆಗಳು.

ವಿ. ವಿ :- ಶ್ರೀಪಾದರಾಜರು ಮುಳಬಾಗಿಲಿನಲ್ಲಿ ಸ್ಥಾಪಿತವಾಗಿರುವ ಮಠಾಧಿಪತಿಗಳು. ಇವರ ಶಿಷ್ಯರೇ ವ್ಯಾಸಯೋಗಿಗಳು. ಇವರು ಸೋಸಲೆಯಲ್ಲಿರುವ ವ್ಯಾಸರಾಜ ಮಠಾಧಿಪತಿಗಳಾಗಿ

ದ್ದವರು. ವ್ಯಾಸರಾಜರ ಶಿಷ್ಯರು ಶ್ರೀ ಪುರಂದರದಾಸರು. ದಾಸರ ನಾಲ್ಕನೆಯ ಪುತ್ರ ಮಧ್ವಪತಿ ಎಂಬುವವರು ವಿಜಯದಾಸರಾಗಿ ಜನಿಸಿ ಪುರಂದರದಾಸರು ಆಜ್ಞೆ ಮಾಡಿದ್ದ ೨೫೦೦೦ ರಚನೆಗಳನ್ನು ಪೂರ್ಣಮಾಡಿದರೆಂಬ ಹೇಳಿಕೆಯುಂಟು.

**ಮನ್ಮನೋಭೀಷ್ಟಫಲದಂ–ಸರ್ವಾಭೀಷ್ಟ ಫಲಪ್ರದಮ್ ।**
**ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಮ್ ॥೨೨॥**

**ಸ. ಅ :-** ನನ್ನ ಮನಸ್ಸಿನ ಇಚ್ಛೆಯಂತೆ ಫಲವನ್ನು ಕರುಣಿಸುವ, ಎಲ್ಲರ ಇಷ್ಟಾರ್ಥಗಳನ್ನೂ ಕೊಡುವ, ದಾಸಶ್ರೇಷ್ಠರೂ ದಯಾಘನರೂ ಆದ ಶ್ರೀ ಪುರಂದರ ಗುರುಗಳನ್ನು ನಮಸ್ಕರಿಸುತ್ತೇನೆ.

**ವಿ. ವಿ :-** ದೇವರ್ಷಿ ನಾರದರೇ ಪುರಂದರದಾಸರಾಗಿ ಜನ್ಮಗ್ರಹಣ ಮಾಡಿದರೆಂಬ ನಂಬುಗೆ ದಾಸಕೂಟದಲ್ಲಿ ಪ್ರಥಿತವಾಗಿದೆ. ಅವರು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ರಚನೆಗಳನ್ನು ಮಾಡಿ ಐದು ಲಕ್ಷಕ್ಕೆ ಸರಿಮಾಡುವಂತೆ ತಮ್ಮ ಕೊನೆಯ ಮಗ ಮಧ್ವಪತಿಗೆ ಆಜ್ಞೆ ಮಾಡಿದ್ದರೆಂಬ ಹೇಳಿಕೆ ಪ್ರಚಲಿತವಾಗಿದೆ.

**ಪೃಥ್ವೀಮಂಡಲ ಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ ॥**
**ವೈಷ್ಣವಾಃ ವಿಷ್ಣುಹೃದಯಾಸ್ತಾನ್ನಮಸ್ಯೇ ಗುರೂನ್ಮಮ ॥೨೩॥**

**ಸ. ಅ :-** ಭೂಮಂಡಲದ ನಡುವೆ ಇರುವ ಪೂರ್ಣಬೋಧರ [ಮಧ್ವಾಚಾರ್ಯರ] ಮತಾನುಯಾಯಿಗಳಾದ ವೈಷ್ಣವರುಗಳು, ವಿಷ್ಣುವನ್ನು ತಮ್ಮ-ತಮ್ಮ ಹೃದಯದಲ್ಲಿ ಸ್ಥಾಪಿಸಿಕೊಂಡಿರುವವರು-ಇವರೆಲ್ಲರನ್ನೂ ನನ್ನ ಗುರುಗಳೆಂದು ನಮಸ್ಕರಿಸುತ್ತೇನೆ.

**ವಿ.ವಿ:-** ಭಜನೆಗೆ ತೊಡಗುವವರು ಪ್ರಥಮತಃ ಹೀಗೆ ಭಗವಂತನನ್ನು ಗುರು-ಹಿರಿಯರನ್ನೂ ಸ್ಮರಿಸಿಕೊಳ್ಳುವುದು ಶಿಷ್ಟಾಚಾರ.

ಶ್ರೀ ಲಕ್ಷ್ಮೀನೃಸಿಂಹಾಯ ನಮಃ-ಹರಿಕಥಾಮೃತಸಾರ-ಮಂಗಳಾಚರಣ ಸಂಧಿ

---

ರಾಗ–ನಾಟ ತಾಳ–ತ್ರಿಪುಟಿ

**ಹರಿಕಥಾಮೃತಸಾರ ಗುರುಗಳ**
**ಕರುಣದಿಂದಾಪನಿತು ಪೇಳುವೆ**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ಪ॥**

ಸ. ಅ :- ಶ್ರೇಷ್ಠರಾದ ಭಗವದ್ಭಕ್ತರೆ, ಹರಿಯ ಕಥೆ ಎಂಬ ಅಮೃತಸಾರವನ್ನು ಗುರುಗಳ ಕರುಣದಿಂದ ನನ್ನಿಂದಾದಷ್ಟು ಹೇಳುತ್ತೇನೆ. ಪ್ರೀತಿಯಿಂದ ಕೇಳುವುದು.

ವಿ. ವಿ :- ಈಗಿನ ರಾಯಚೂರು ಜಿಲ್ಲೆ ಮಾನವಿ ತಾಲೂಕಿಗೆ ಸೇರಿದ 'ಬ್ಯಾಗವಾಟ' ಎಂಬ ಗ್ರಾಮದಲ್ಲಿ ವಾಸವಾಗಿದ್ದ ನರಸಿಂಹಾಚಾರ್ಯ-ಲಕ್ಷ್ಮೀಬಾಯಿ ಎಂಬ ಮಾಧ್ವ ದಂಪತಿಗಳಿಗೆ ಶ್ರೀನಿವಾಸದೇವರ ಅನುಗ್ರಹದಿಂದ ಪುತ್ರರತ್ನವು ಜನನವಾಗಲು ಶಿಶುವಿಗೆ ಶ್ರೀನಿವಾಸನೆಂದು ಹೆಸರಿಟ್ಟರು. ಕಾಲಕ್ರಮದಲ್ಲಿ ಶ್ರೀನಿವಾಸನು ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರರ ಮಠಾಧಿಪತಿಗಳಾಗಿದ್ದ ವರದೇಂದ್ರತೀರ್ಥರೆಂಬ ಮಹಾಮಹಿಮರ ಅನುಗ್ರಹಕ್ಕೆ ಪಾತ್ರನಾಗಿ ಘೋರವಿದ್ಯಾವಂತನಾಗಿ ಯಶಸ್ವಿಯಾಗಿ ಗುರುಗಳ ಆದೇಶದಂತೆ ಗೃಹಸ್ಥನಾಗಿ ಶ್ರೀನಿವಾಸಾಚಾರ್ಯನಾಗಿ ಮೇಲ್ಮೆಯಲ್ಲಿ ಬಾಳುತ್ತಿದ್ದನು. ವಿಜಯದಾಸರೆಂಬ ದಾಸಶ್ರೇಷ್ಠರು ಒಮ್ಮೆ ಬ್ಯಾಗವಾಟಿಗೆ ಬಂದಿದ್ದಾಗ ಶ್ರೀನಿವಾಸಾಚಾರ್ಯನು ದಾಸರಿಗೆ ಉಚಿತ ಮರ್ಯಾದೆ ಸಲ್ಲಿಸದೆ ಭಾಗವತಾಪಚಾರ ಮಾಡಲು ಪರಿಣಾಮ ಶೂಲೆಗೆ ಗುರಿಯಾದನು. ರೋಗದಿಂದ ಕ್ಷೀಣಿಸುತ್ತಿದ್ದ ಶ್ರೀನಿವಾಸನಿಗೆ ಶ್ರೀ ರಾಘವೇಂದ್ರಸ್ವಾಮಿಗಳು ಸ್ವಪ್ನದಲ್ಲಿ ನಿರ್ದೇಶನ ಮಾಡಿದಂತೆ ತಾನು ಮಾಡಿದ ಭಾಗವತಾಪಚಾರಕ್ಕೆ ಪಶ್ಚಾತ್ತಾಪಪಟ್ಟು ವಿಜಯದಾಸರ ಮರೆಹೋಗಲು ದಾಸರು ತಮ್ಮ ಶಿಷ್ಯರು ಗೋಪಾಲದಾಸರಲ್ಲಿಗೆ ಕಳುಹಿಸಿದರು. ಗೋಪಾಲದಾಸರು ಗುರ್ವಾಜ್ಞೆಯಂತೆ ಶ್ರೀನಿವಾಸಾಚಾರ್ಯರ ವ್ಯಾಧಿಯನ್ನು ಪರಿಹರಿಸಿ ಮರಣೋನ್ಮುಖರಾಗಿದ್ದ ಆಚಾರ್ಯರಿಗೆ ತಮ್ಮ ಆಯುಷ್ಯದಲ್ಲಿ ೪೦ ವರ್ಷಗಳನ್ನು ಧಾರೆ ಎರೆದು ಜೀವದಾನ ಮಾಡಿದರು. ಗುರುಕರುಣದಿಂದ ಚೇತರಿಸಿಕೊಂಡು ಶ್ರೀನಿವಾಸಾಚಾರ್ಯರು ಆ ಗುರುಗಳ ಆಜ್ಞೆಯಂತೆ ಪಂಡರಪುರಕ್ಕೆ ಹೋಗಿ ಚಂದ್ರಭಾಗಾನದಿಯಲ್ಲಿ ಮಿಂದಾಗ ದೊರೆತ ಶಿಲೆಯಲ್ಲಿ ಮೂಡಿದ್ದ ಜಗನ್ನಾಥವಿಠಲ ಎಂಬ ಅಂಕಿತವನ್ನು ಧರಿಸಿ ಕೃತಿಗಳನ್ನು ರಚಿಸುತ್ತ ಆಸೇತು ಹಿಮಾಚಲ ತೀರ್ಥಯಾತ್ರಾ ವ್ಯಾಜದಲ್ಲಿ ಸಂಚರಿಸಿ ಹರಿಭಕ್ತಿ ಪ್ರಚಾರಗೊಳಿಸಿದರು. ತಮ್ಮ ಪರಿಪಕ್ವವಾದ ಜ್ಞಾನದಿಂದ 'ಹರಿಕಥಾಮೃತಸಾರ'ವೆಂಬ ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಭಾಮಿನಿ ಷಟ್ಪದಿಯಲ್ಲಿ ರಚಿಸಿದರು. ಮಧ್ವಮತಾನುಯಾಯಿಗಳಿಗೆ, ಮುಮುಕ್ಷುಗಳಿಗೆ ಇದೊಂದು ದಾರಿದೀಪವಿದ್ದಂತೆ. ಗ್ರಂಥದ ಪ್ರಾರಂಭದಲ್ಲಿ ಮಂಗಳಾಚರಣೆಗಾಗಿಯೇ ಒಂದು ಅಧ್ಯಾಯ ಮೀಸಲಾಗಿದೆ.

**ಭಾಮಿನೀಷಟ್ಪದಿ :-**

ಆರು ಪಾದಗಳುಳ್ಳ ಕನ್ನಡ ಪದ್ಯಗಳು ಷಟ್ಪದಿಗಳು.
ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕಗಳೆಂದು ಇವಾರು ಬಗೆ. ಇವೆಲ್ಲ ಮಾತ್ರಾ ಗಣಗಳುಳ್ಳವು. ಇವುಗಳಲ್ಲಿ ಪ್ರತಿಯೊಂದು ಪದ್ಯದಲ್ಲೂ ೧, ೨, ೪, ೫ ನೆಯ ಪಾದಗಳಲ್ಲಿರುವ ಮಾತ್ರಾ ಸಂಖ್ಯೆಗಳ ಒಂದೂವರೆಯಷ್ಟು ಮತ್ತು ಒಂದು ಗುರುವು, ೩ ಮತ್ತು ೬ ನೆಯ ಪಾದಗಳಲ್ಲಿರುತ್ತವೆ. ಈ ಪಾದಾಂತ್ಯದ ಅಕ್ಷರಗಳು ಹ್ರಸ್ವವಾಗಿದ್ದರೂ ಗುರುವೆಂದೇ ಭಾವಿಸಬೇಕು. ಭಾಮಿನೀ ಷಟ್ಪದಿಯಲ್ಲಿ ಮೂರು ಮತ್ತು ನಾಲ್ಕು ಮಾತ್ರೆಗಳಿಗೆ ಒಂದೊಂದು ಗಣದಂತೆ ೧, ೨, ೪, ಮತ್ತು ೫ನೇಯ ಪಾದಗಳಲ್ಲಿ ೧೪ ಮಾತ್ರೆಗಳೂ ೩ ಮತ್ತು ೬ ನೆಯ ಪಾದಗಳಲ್ಲಿ ೨೧ ಮಾತ್ರೆ

ಮತ್ತು ೧ ಗುರುವೂ ಇರುತ್ತದೆ. ಲಘು ಮತ್ತು ಗುರುಗಳನ್ನು (ᴗ-): ಹೀಗೆ ಗುರುತಿಸುವರು, ಲಘು ಮತ್ತು ಗುರು. (ᴗ-) ಲಘು-ಗುರು-ಲಘು (ᴗ-ᴗ) ಈ ಬಗೆಯ ಗಣಗಳನ್ನು ಪ್ರಯೋಗಿಸಬಾರದು. ಪ್ರಾಸಾದಿ ನಿಯಮಗಳಿರಬೇಕು. ಈ ಪದ್ಯಗಳಿಗೆ ತ್ರಿಪುಟ ತಾಳವನ್ನು ಹೇಳಿರುವುದು ೩ ಮತ್ತು ೪ ಮಾತ್ರೆಗಳ ಅಳತೆಯಿಂದ.

**ಶ್ರೀ ರಮಣಿ ಕರಕಮಲಪೂಜಿತ**
**ಚಾರುಚರಣಸರೋಜ ಬ್ರಹ್ಮಸ-**
**ಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖ ನುತ**
**ನೀರಜಭವಾಂಡೋದಯಸ್ಥಿತಿ**
**ಕಾರಣನೇ ಕೈವಲ್ಯದಾಯಕ**
**ನಾರಸಿಂಹನೇ ನಮಿಪೆ ಕರುಣಿಪುದೆಮಗೆ ಮಂಗಳವ ||೧||**

ಸ. ಅ :- ರಮಾದೇವಿಯ ಕಮಲ ಸದೃಶ ಹಸ್ತಗಳಿಂದ ಪೂಜಿಸಲ್ಪಟ್ಟ ಮನೋಹರವಾದ ಚರಣಕಮಲಗಳನ್ನುಳ್ಳವನಾದ; ಬ್ರಹ್ಮ, ವಾಯು, ಸರಸ್ವತಿ, ಆದಿಶೇಷ, ಗರುಡ, (ಭವ+ಇಂದ್ರ) ರುದ್ರ, ದೇವೇಂದ್ರರೇ ಮೊದಲಾದವರಿಂದ ಸ್ತುತಿಸಲ್ಪಟ್ಟವನಾದ; ಬ್ರಹ್ಮಾಂಡದ ಉತ್ಪತ್ತಿ ಮತ್ತು ಸ್ಥಿತಿಗೆ (ಇರುವಿಕೆಗೆ) ಕಾರಣನೂ, ಮೋಕ್ಷವನ್ನು ಕರುಣಿಸುವವನೂ ಆದ ಹೇ ನಾರಸಿಂಹನೇ ನಿನಗೆ ನಮಸ್ಕರಿಸುತ್ತೇನೆ. ನಮ್ಮೆಲ್ಲರಿಗೂ ಮಂಗಳವನ್ನು ಕರುಣಿಸು.

ವಿ. ವಿ :- 'ನಮಗೆ ಮಂಗಳವ ಕರುಣಿಸುವುದು' ಎಂದು ಹೇಳಿರುವುದು ತಮಗೆಮಾತ್ರವಲ್ಲದೆ ತಮ್ಮ ಶಿಷ್ಯರುಗಳಿಗೆ ಹಾಗೂ ಇತರ ಎಲ್ಲ ಭಕ್ತರುಗಳಿಗೂ ಸೇರಿ ಎಂಬ ಉದ್ದೇಶದಿಂದಲಿರಬೇಕು. ಜಗನ್ನಾಥದಾಸರ ಕುಲದೈವವು ಲಕ್ಷ್ಮೀನರಸಿಂಹಸ್ವಾಮಿ, ಅವರ ಉಪಾಸನಾ ಬಿಂಬಮೂರ್ತಿಯೂ ಲಕ್ಷ್ಮೀನರಸಿಂಹನೆ. ಆದುದರಿಂದ ನಾರಸಿಂಹನೆ ನಮಿಪೆ ಎಂದು ಗ್ರಂಥಾರಂಭದಲ್ಲಿ ಹೇಳಿರುವರು. ಹರಿಕಥಾಮೃತಸಾರವೆಂಬ ಗ್ರಂಥದಲ್ಲಿ ಪ್ರತಿಪಾದ್ಯನಾಗುವ ದೇವರು ಹರಿಯು. ಆದುದರಿಂದ ಪ್ರಥಮತಃ ಹರಿಯನ್ನಲ್ಲದೆ ಆತನ ಅಂಶಿಯಾದ ನಾರಸಿಂಹನ ಸ್ತೋತ್ರ ವಿರುವುದರ ಔಚಿತ್ಯವನ್ನು ಹಲವರು ಪ್ರಶ್ನಿಸಬಹುದು. ಗ್ರಂಥಕರ್ತೃವು ತನ್ನ ಕುಲದೈವವನ್ನೋ, ತನ್ನ ಉಪಾಸನಾ ಮೂರ್ತಿಯನ್ನೋ ವಂದಿಸಿ ಗ್ರಂಥರಚನೆಗೆ ತೊಡಗುವುದು ಬೆಳೆದು ಬಂದಿರುವ ಪದ್ಧತಿಯೇ ಹೌದು. ದಾಸರ ಈ ರಚನೆಯಲ್ಲಿ ಏಕಕಾಲದಲ್ಲಿ ಗ್ರಂಥ ಪ್ರತಿಪಾದ್ಯನಾದ ದೇವರು ಮತ್ತು ತಮ್ಮ ಕುಲದೈವ ಇಬ್ಬರನ್ನು ನಮಿಸಿದ್ದಾರೆಂಬುದು ಜಿಜ್ಞಾಸುಗಳಿಗೆ ಗೋಚರವಾದೀತು. ಕೇವಲ ಕುಲದೈವವನ್ನೇ ಆಗಿದ್ದಲ್ಲಿ ನಾರಸಿಂಹನೆ ಎಂದು ಪ್ರಯೋಗಿಸಿರುವುದರಿಂದ [illegible]

ಇತ್ಯತ್ರಪ್ರಭುವಿತ್ಯರ್ಥಃ ಎಂದರೆ-ಅರಾಃ-ದುಃಖ, ಅಜ್ಞಾನಾದಿ ದೋಷಗಳು ಇವು ಯಾರಲ್ಲಿಲ್ಲವೋ ಅವರು ನಾರರು. ಸಂಸಾರಾದಿ ಸಮಸ್ತಕೋಟಲೆಗಳಿಂದಲೂ ಬಿಡಿಸಿಕೊಂಡವರು, ಮುಕ್ತರು. ಅವರುಗಳಿಗೆ ಸಿಂಹಃ ಎಂದರೆ ಪ್ರಭುವು. ವೈಕುಂಠಾಧಿಪತಿ, ನಾರಾಯಣನು ಎಂದು. ಹಾಗೂ ದಾಸರು ಸ್ತುತಿಸಿರುವ ನಾರಸಿಂಹನಿಗೆ ರಮಾ, ಬ್ರಹ್ಮಸಮೀರವಾಣ್ಯಾದಿ ದೇವತೆಗಳಿಂದ ಕ್ರಮ ಸೇವೆಯೂ, ಸೃಷ್ಟಿ-ಸ್ಥಿತಿ ಲಯ ಕರ್ತೃತ್ವವೂ ಹೇಳಲ್ಪಟ್ಟಿರುವುದು ಮೂಲಪುರುಷನಾದ ಹರಿ ಅಥವ ನಾರಾಯಣನಿಗೆ ಸಲ್ಲತಕ್ಕವು. ಹೀಗೆ ನಾನಾವಿಧವಾಗಿ ಚರ್ಚಿಸಿ ದಾಸರ ಪ್ರಯೋಗವು ಸಾಧುವೆಂದು ವಿದ್ವಾಂಸರುಗಳು ನಿರ್ಧರಿಸಿದ್ದಾರೆ.

**ಜಗದುದರನತಿವಿಮಲ ಗುಣರೂ-**
**ಪಗಳನಾಲೋಚನದಿ ಭಾರತ**
**ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ ।**
**ಬಗೆಬಗೆಯ ನೂತನವ ಕಾಣುತ**
**ಮಿಗೆಹರುಷದಿಂ ಪೊಗಳಿ ಹಿಗ್ಗುವ**
**ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥೨॥**

ಸ. ಅ :- ಲೋಕವನ್ನೆಲ್ಲ ತನ್ನ ಹೊಟ್ಟೆಯಲ್ಲಿಟ್ಟುಕೊಂಡಿರುವವನಾದ ಪರಮಾತ್ಮನ ಅತ್ಯಂತ ಪರಿಶುದ್ಧವಾದ ಗುಣ ಮತ್ತು ರೂಪಗಳನ್ನೂ; ಭಾರತ ಹಾಗೂ ವೇದಗಳ ಸಮೂಹದಲ್ಲಿ ವಿವರಿಸಿರುವುದನ್ನು ಅತಿಕ್ರಮಿಸಿ ಮೂಲ ಹಾಗೂ ಅವತಾರಗಳಲ್ಲಿ ಮಾಡುವ ಆತನ ವಿನೂತನ ಕಾರ್ಯಗಳನ್ನೂ ತನ್ನ ಆಲೋಚನೆಯಿಂದ [ಜ್ಞಾನದೃಷ್ಟಿಯಿಂದ] ಕಾಣುತ್ತ, ಅತ್ಯಂತ ಸಂತೋಷದಿಂದ ಹೊಗಳುತ್ತಾ ಹಿಗ್ಗುವ; ಸತ್ವ, ರಜಸ್, ತಮಸ್ಸೆಂಬ ಮೂರು ಗುಣಗಳಿಗೆ ಅಭಿಮಾನಿಯಾದ ಮಹಾಲಕ್ಷ್ಮೀದೇವಿಯು ಪ್ರತಿದಿನದಲ್ಲೂ (ನಮ್ಮ ಇಷ್ಟಾರ್ಥವನ್ನಿತ್ತು) ಸಂತೈಸಲಿ.

ವಿ. ವಿ :- ಮಹಾಪ್ರಳಯದಲ್ಲಿ ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವನ್ನೂ ನಾರಾಯಣನು ತನ್ನ ಉದರದಲ್ಲಿ ಅಡಗಿಸಿಕೊಳ್ಳುವನು. ಆಗ ರಮಾದೇವಿಯರು ಸತ್ವಗುಣ ಪ್ರಧಾನವಾದ ತಮ್ಮ ಶ್ರೀದೇವಿಯ ರೂಪದಲ್ಲಿ ನಾರಾಯಣನೊಂದಿಗೆ ಪವಡಿಸುತ್ತ ಪ್ರಪಂಚದ ಸೃಷ್ಟಿಗೂ; ರಜೋಗುಣ ಪ್ರಧಾನವಾದ ತಮ್ಮ ಭೂದೇವಿಯ ರೂಪದಲ್ಲಿ ಆಲದೆಲೆಯ ಶಯ್ಯೆಯನ್ನು ಕಲ್ಪಿಸಿ ಆತನಿಗೆ ಜಗತ್ತಿನ ರಕ್ಷಣೆಗೂ; ತಮೋಗುಣದ ದುರ್ಗಾಂಬರೂಪದಲ್ಲಿ ಲಯಕ್ಕೂ ಸಹಕರಿಸುತ್ತ ಅನುಗಾಲವೂ ಎಡಬಿಡದೆ ಆತನನ್ನು ಓಲೈಸುವರು. ಆತನು ಎತ್ತಿದ ಮತ್ಸ್ಯಾದಿ ಹತ್ತು, ಕೇಶವಾದಿ ೨೪, ನಾರಾಯಣಾದಿ

ನೂರು, ಇಪ್ಪತ್ತು ಸಾವಿರ, ಹರ ಮುಂತಾದ ಅನಂತ ರೂಪಗಳಲ್ಲೆಲ್ಲ ಆತನ ಆಜ್ಞೆಯಂತೆ ಆಯಾರೂಪಗಳಿಗನುಗುಣವಾಗಿ ಬಹುರೂಪಗಳನ್ನು ತಾಳಿ ಸೇವಿಸುತ್ತಿದ್ದರೂ ಪರಮಾತ್ಮನ ಗುಣಗಳನ್ನು ಅರಿಯಲು ಅಸಮರ್ಥರಾಗಿರಲು ಇಂತಹ ಅನಂತ ಕಲ್ಯಾಣ ಗುಣಗಣನಾದ ಪರಮಾತ್ಮನ ಅನುಗ್ರಹವು ನಮಗೆ ಉಂಟಾಗಬೇಕಾದಲ್ಲಿ ಶ್ರೀ ಲಕ್ಷ್ಮೀದೇವಿಯ ಅನುಗ್ರಹವು ಅತ್ಯವಶ್ಯವಾದುದರಿಂದ ದಾಸರು ಆಕೆಯನ್ನು ಸ್ತುತಿಸಿದ್ದಾರೆ.

**ನಿರುಪಮಾನಂದಾತ್ಮಭವನಿ**
**ರ್ಜರಸಭಾ ಸಂಸೇವ್ಯ ಋಜುಗಣ**
**ದರಸೆ ಸತ್ವಪ್ರಚುರವಾಣೀಮುಖಸರೋಜೇನ ।**
**ಗರುಡಶೇಷ ಶಶಾಂಕದಳಶೇ-**
**ಖರರ ಜನಕ ಜಗದ್ಗುರುವೆ ತ್ವ-**
**ಚ್ಚರಣಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ ॥೩॥**

ಪ. ಅ :- ಹೋಲಿಕೆಗೆ ನಿಲುಕದ[ಅಸದೃಶವಾದ]ಆನಂದಸ್ವರೂಪನಾದ ಪರಮಾತ್ಮನ ಪುತ್ರನೂ; ದೇವತೆಗಳ ಸಮೂಹದಿಂದ ಪೂಜಿಸಲ್ಪಡುವವನೂ; ಬ್ರಹ್ಮ ಪಟ್ಟಕ್ಕೆ ಅರ್ಹರಾದವರು ಋಜಗಣಗಳು–ಅವರುಗಳಿಗೆಲ್ಲ ರಾಜನಾಗಿರು ವವನೂ; ವಿಶುದ್ಧ ಸತ್ವಸ್ವರೂಪನಾದವನೂ(ಸತ್ವಗುಣಪ್ರಧಾನನಾದವನೂ) ಸರಸ್ವತೀದೇವಿಯ ಮುಖವೆಂಬ [ಸರೋಜ+ಇನ] ತಾವರೆಗೆ ಸೂರ್ಯ ಪ್ರಾಯನಾದವನೂ; ಗರುಡ, ಆದಿಶೇಷ, ರುದ್ರರುಗಳಿಗೆ ತಂದೆಯಾಗಿರು ವವನೂ; ಲೋಕಕ್ಕೆಲ್ಲ ಗುರುವೂ ಆದವನು ಯಾರೋ ಆ ಬ್ರಹ್ಮದೇವನೆ! ನಿನ್ನ ಪಾದಗಳಿಗೆ ಅಭಿವಂದಿಸುವೆನು. ಒಳ್ಳೆಯ ಬುದ್ಧಿಯನ್ನು ಕರುಣಿಸುವುದು.

ವಿ. ವಿ - (ನಿರ್ + ಜರ) ಮುಪ್ಪೇ ಇಲ್ಲದ ಕಾರಣ ದೇವತೆಗಳು ನಿರ್ಜರರು.
೨೦೦ ಮಂದಿ ಋಜುಗಣಗಳಲ್ಲೆಲ್ಲ ಶ್ರೇಷ್ಠತಮನು ಬ್ರಹ್ಮದೇವನು. ಆದುದರಿಂದ ಆತನು ಋಜುಗಣಗಳರಸು.

ಬ್ರಹ್ಮದೇವನು ಮಹತ್ತತ್ವ ಶರೀರಿ. ಈ ತತ್ವದಿಂದ ವೈಕಾರಿಕ, ತೈಜಸ, ತಾಮಸನೆಂಬ ಮೂರು ಬಗೆಯ ಅಹಂಕಾರ ತತ್ವಗಳು ಉದಿಸಿದುವು. ಈ ಮೂರು ತತ್ವಗಳಿಗೆ ಕ್ರಮವಾಗಿ ಗರುಡ, ಶೇಷ, ರುದ್ರರು ಅಭಿಮಾನಿದೇವತೆಗಳು. ಈ ರೀತಿ ಈ ಮೂವರೂ ಬ್ರಹ್ಮದೇವರ ಪುತ್ರರು (ವಿಷ್ಣುರಹಸ್ಯ ವಚನ).

ಪ್ರಕೃತಿಯಲ್ಲಿ ಪುರುಷನಾಮಕ ಚತುರ್ಮುಖ ಬ್ರಹ್ಮನೂ, ಆತನಿಂದ ವಾಣಿಯಲ್ಲಿ ಜೀವಾಭಿಮಾನಿ ಶೇಷನೂ, ಕಾಲಾಭಿಮಾನಿ ಗರುಡನೂ, ಅನಂತರ ರುದ್ರನೂ ಜನಿಸಿದ ರೆಂಬ ವಿಷ್ಣು ರಹಸ್ಯ ವಚನೋಕ್ತಿಯೂ ಉಂಟು.

ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ -(ಅಧ್ಯಾಯ ೩; ಪದ್ಯ ೯-೧೩.) ಪರಮಾತ್ಮನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧನೆಂಬ-ನಾಲ್ಕು ರೂಪಗಳನ್ನು ಧರಿಸಿದಾಗ ಲಕ್ಷ್ಮೀದೇವಿಯೂ ಅದಕ್ಕೆ ತಕ್ಕಂತೆ ನಾಲ್ಕುರೂಪಗಳನ್ನು ಪಡೆದಳು. ವಾಸುದೇವ ನಾಮಕ ಪರಮಾತ್ಮನಿಂದ ಮಾಯೆಯಲ್ಲಿ ಪುರುಷನೂ, ಸಂಕರ್ಷಣನಾಮಕ ಪರಮಾತ್ಮನಿಂದ ಜಯೆಯಲ್ಲಿ ಸೂತ್ರನೂ(ವಾಯುವೂ), ಪ್ರದ್ಯುಮ್ನನಾಮಕ ಪರ ಮಾತ್ಮನಿಂದ ಕೃತಿಯಲ್ಲಿ ಪ್ರಕೃತಿ ಮತ್ತು ಶ್ರದ್ಧಾ ಎಂಬ ಕುಮಾರಿಯರೂ ಜನಿಸಿದರು [ಅನಿರುದ್ಧನಾಮಕ ಪರಮಾತ್ಮನ ಪತ್ನಿಯ ನಾಮ ಶಾಂತಾ ಎಂದು]

ಪ್ರಕೃತಿಯೇ ಸರಸ್ವತಿ. ಈಕೆಗೆ ಪುರುಷನಿಂದ (ಬ್ರಹ್ಮನಿಂದ) ಶೇಷನೂ; ಶ್ರದ್ಧಾ ಈಕೆಯೇ ಭಾರತಿ ಈಕೆಗೆ ವಾಯುವಿನಿಂದ ಗರುಡನೂ ಜನಿಸಿದರೆಂದಿದೆ. ಮನಸ್ಸು; ಬುದ್ಧಿ, ಚಿತ್ತ-ಈ ಮೂರು ಪದಗಳೂ ವಾಡಿಕೆಯಲ್ಲಿ ಏಕಾರ್ಥಕಗಳಾಗಿದ್ದರೂ ಪರಸ್ಪರ ಭೇದವುಂಟು. ಮನಸ್ಸು ಪ್ರಥಮತಃ ಉತ್ಪನ್ನವಾಗುವ ಚಂಚಲತ್ವ. ಮನಸ್ಸಿನ ಅಭಿಮಾನದೇವನು ಚಂದ್ರ. ಬುದ್ಧಿಯು ಉತ್ಪನ್ನವಾಗುವ ಚಂಚಲತೆ ಯನ್ನು ನಿಶ್ಚಯಿಸಿ ನಿಶ್ಚಲವಾಗುವಂತೆ (ದೃಢವಾಗುವಂತೆ) ಮಾಡುವುದು. ಬುದ್ಧಿಗೆ ಅಭಿಮಾನಿ ಬೃಹಸ್ಪತಿ. ಚಿತ್ತವೆಂಬುದು ಸದ್ವೃತ್ತಿ. ಚಿತ್ತಾಭಿಮಾನಿ ದೇವತೆಗಳು ಬ್ರಹ್ಮ ಮತ್ತು ವಾಯುದೇವ. ಶಶಾಂಕದಳಶೇಖರ ಶಶಾಂಕ-ಚಂದ್ರ, ಆತನ ದಳ - ದೇಹಭಾಗ, ಅದನ್ನು ಶೇಖರ–ತಲೆಯಲ್ಲಿ ಉಳ್ಳವ - ಚಂದ್ರಖಂಡಧರ, ರುದ್ರದೇವ.

ಗುರುವಾಗುವವನಿಗೆ ತನ್ನ ವಿದ್ಯೆಯಲ್ಲಿ ಪರಿಪೂರ್ಣ ಜ್ಞಾನವಿರಬೇಕು. ಸಂಶಯವಿ ರಲೇಬಾರದು. ಅನ್ಯರ ಸಂಶಯವನ್ನು ನಿವಾರಿಸಲು ಸಮರ್ಥನಾಗಿರಬೇಕು. ಹೀಗೆ ಸುಮಾರು ೩೨ ಗುಣಗಳು ಹೇಳಲ್ಪಟ್ಟಿವೆ. ಲಕ್ಷಣಜ್ಞರು ಹೇಳುವ ಆತನ ಪರಿಮಾಣವು ೯೬" ಎತ್ತರ. ಇದಕ್ಕೆ ಸಮನಾಗುವಂತೆ ಆತನ ಒಂದು ಮಾರು ಇಲ್ಲವೆ ನಾಲ್ಕು ಮೊಳಗಳ, ಅಥವಾ ಏಳು ಹಜ್ಜೆಗಳ ಅಳತೆಯು ಇರಬೇಕು. ಇದಕ್ಕೆ ನ್ಯಗ್ರೋಧ ಪರಿಮಂಡಲನೆನ್ನುವರು. ಸನ್ಮತಿ ಎಂಬುದಕ್ಕೆ ಹರಿತತ್ವವನ್ನರಿತು ಆತನ ಪಾದಾರವಿಂದಗಳಲ್ಲಿ ಮನಸ್ಸು ಲೀನವಾಗುವಂತೆ ಸಹಕರಿಸುವ ಬುದ್ಧಿ-

**ಆರುನೂರೆರಡೊಂದುಸಾವಿರ**
**ಮೂರೆರಡುಶತಶ್ವಾಸಜಪಗಳ**
**ಮೂರುವಿಧಜೀವರೊಳಗಬ್ಜಜ ಕಲ್ಪಪರಿಯಂತ ।**
**ತಾರಚಿಸಿ ಸತ್ವರಿಗೆ ಸುಖಸಂ-**
**ಸಾರಮಿಶ್ರರಿಗಧಮ ಜನರಿಗ-**
**ಪಾರದುಃಖಗಳೀವ ಗುರುಪವಮಾನ ಸಲಹೆಮ್ಮ ॥೪॥**

ಸ. ಅ :- ತ್ರಿವಿಧ ಜೀವರಾಶಿಗಳಲ್ಲಿ ಇದ್ದುಕೊಂಡು ದಿನಂಪ್ರತಿ ಇಪ್ಪತ್ತೊಂದು ಸಾವಿರದ ಆರುನೂರು ಶ್ವಾಸೋಚ್ಛ್ವಾಸ ರೂಪದ ಹಂಸಮಂತ್ರ ಜಪವನ್ನು ಬ್ರಹ್ಮಕಲ್ಪ ಪರಿಯಂತ ಮಾಡುತ್ತ (ಮಾಡಿಸುತ್ತ) ಸಾತ್ವಿಕರಿಗೆ ಮುಕ್ತಿ, ರಾಜಸರಿಗೆ ಸುಖ-ದುಃಖ ಮಿಶ್ರವಾದ ಸಂಸಾರ, ತಾಮಸರಿಗೆ ಸಹಿಸಲದಳವಾದ ದುಃಖವುಳ್ಳ ಅಂಧತಮಸ್ಸನ್ನು ಕಲ್ಪಿಸುವ, (ಕೊಡುವುದಕ್ಕೆ ಕಾರಣಭೂತನಾದ) ಗುರು ಮುಖ್ಯಪ್ರಾಣನೇ ನಮ್ಮನ್ನು ರಕ್ಷಿಸು.

ವಿ. ವಿ : ಆರುಮೂರು (೬×೩) ಹದಿನೆಂಟು, ಎರಡೊಂದು (೨+೧) ಮೂರು ಒಟ್ಟು ಇಪ್ಪತ್ತೊಂದು ಸಾವಿರ (ಜತೆಗೆ) ಮೂರೆರಡು ಶತ (೩×೨×೧೦೦) ಆರುನೂರು ಎಲ್ಲ ಸೇರಿ ೨೧೬೦೦ ಸಂಖ್ಯೆಯ ಶ್ವಾಸೋಚ್ಛ್ವಾಸಗಳು ದಿನಂಪ್ರತಿ ಜೀವಿಯು ನಡೆಸುವ ಉಸಿರಾಟದ ಕ್ರಿಯೆಗಳು. ಈ ಕ್ರಿಯೆಗಳಲ್ಲಿ ಉಸಿರನ್ನು ಒಳಕ್ಕೆ ಎಳೆದುಕೊಳ್ಳುವುದು ನಿಶ್ವಾಸವು. ಹೊರಕ್ಕೆ ಬಿಡುವುದು ಉಚ್ಛ್ವಾಸವು. ಈ ಎರಡು ಕ್ರಿಯೆಗಳಿಗೂ ನಡುವೆ ಸ್ವಲ್ಪ ಹೊತ್ತು ದೇಹದೊಳಗೆ ವಾಯುವು ತಟಸ್ಥವಾಗಿರುವುದು. ಪ್ರಾಣಾಯಾಮ ಮಾಡುವವರು ಈ ಕ್ರಿಯೆಗಳನ್ನು ಪೂರಕ ಕುಂಭಕ, ರೇಚಕಗಳೆನ್ನುವರು. ಈ ಕ್ರಿಯೆಗಳು ನಡೆಯುವಾಗ 'ಹಂಸಃಸೋಹಂಸ್ವಾಹಾ' ಎಂಬ ಮಂತ್ರ ಜಪವು ನಡೆಯುತ್ತಿರುತ್ತದೆ. ಬಾಯಿಯನ್ನು ಮುಚ್ಚಿಕೊಂಡು ಮೂಗಿನ ಹೊಳ್ಳೆಗಳ ದ್ವಾರ ಈ ಕ್ರಿಯೆಗಳನ್ನು ನಡೆಸುತ್ತ ಎಳೆದುಕೊಳ್ಳುವಾಗ ಸೋಹಂ ಎಂದೂ, ನಿರೋಧ ಮಾಡುವಾಗ ಹಂಸಃ ಎಂದೂ ಬಿಡುವಾಗ 'ಸ್ವಾಹಾ' ಎಂದೂ ಮನಸಾ ಉಚ್ಚಾರ ಮಾಡುವುದೇ ಷಡಕ್ಷರಯುತ ಹಂಸ ಮಂತ್ರ ಜಪವು. ಇದರಿಂದ ದೇಹಕ್ಕೆ ಯಾವ ವಿಧವಾದ ತೊಂದರೆಯೂ ಆಗದೆ ಉಸಿರಾಟವು ನಡೆಯುತ್ತಿರುತ್ತದೆ. ಈ ರಹಸ್ಯವನ್ನರಿತುಕೊಂಡು ಸಂಕಲ್ಪಿಸಿ ಹರಿಸಮರ್ಪಣೆ ಮಾಡುತ್ತ ಜಪಿಸುವ ತ್ರಿವಿಧ ಜೀವರುಗಳಲ್ಲಿ ಸಾತ್ವಿಕ ಜೀವಿಗಳಿಗೆ ಮುಕ್ತಿಯೂ, ಉಪಾಸನಾ ಭೇದಭಾವದಿಂದ ರಾಜಸರಿಗೆ ನಿತ್ಯ ಸಂಸಾರದ ಸುಖದುಃಖಗಳೂ, ತಾಮಸರಿಗೆ ಸಹಿಸಲಸದಳವಾದ ಅಂಧಕಾರತಮಸ್ಸಿನ ದುಃಖವೂ ದೊರಕುವುದು.

ಚತುರವದನನರಾಣಿಯತಿರೋ-
ಹಿತ ವಿಮಲ ವಿಜ್ಞಾನಿ ನಿಗಮ-
ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ ।
ಸುತಿಸಿ ಬೇಡುವೆ ಜನನಿ ಲಕ್ಷ್ಮೀ-
ಪತಿಯ ಗುಣಗಳ ತುತಿಪುದಕೆ ಸ-
ನ್ಮತಿಯ ಪಾಲಿಸಿ ನೆಲಸು ನೀ ಮದ್ವದನಸದನದಲಿ ||೫||

ಸ. ಅ :- ಚತುರ್ಮುಖ ಬ್ರಹ್ಮನ ಪತ್ನಿಯೆ, ಸದಾನೆನಪಿನಲ್ಲಿ ನಿಲ್ಲುವ ನಿರ್ದುಷ್ಟವಾದ ವಿಶೇಷಜ್ಞಾನವುಳ್ಳವಳೆ, ವೇದಗಳ ಸಮೂಹಕ್ಕೆ ಅಭಿಮಾನಿಯೆ, ವೀಣೆಯನ್ನು ಕೈಲಿ ಹಿಡಿದಿರುವವಳೆ, ವೇದಗಳ ಸಾರವನ್ನು ಉಪದೇಶಿಸುವವಳೆ, ತಾಯಿಯೆ, ಲಕ್ಷ್ಮೀಪತಿಯ ಗುಣಗಳನ್ನು ಕೊಂಡಾಡಲು ಬೇಕಾದ ದೃಢವಾದ (ಒಳ್ಳೆಯ) ಬುದ್ಧಿಯನ್ನು ಅನುಗ್ರಹಿಸಿ ನನ್ನ ಮುಖವೆಂಬ ಮನೆಯಲ್ಲಿ ನೀನು ಸ್ಥಿರಳಾಗಿ ನೆಲಸು. ನಿನ್ನನ್ನು ನಮಸ್ಕರಿಸಿ ಬೇಡುತ್ತೇನೆ.

ವಿ. ವಿ :- ಬ್ರಹ್ಮದೇವನು ದೇವಗಣಗಳಲ್ಲೆಲ್ಲ ಶ್ರೇಷ್ಠನೂ, ಜಗದ್ಗುರುವೂ ಆಗಿರುವಂತೆ ಆತನ ಪತ್ನಿಯಾದ ಸರಸ್ವತಿಯೂ ಇರುವಳೆಂಬ ಭಾವದಿಂದಲೇ ದಾಸರು 'ಚತುರವದನನ ರಾಣಿ' ಎಂದು ಪ್ರಯೋಗಿಸಿರಬೇಕು.

ಯಾವಾಗಲೂ ಮರೆಯದ ಸ್ಥಿರವಾದ, ಶುದ್ಧವಾದ ಜ್ಞಾನವುಳ್ಳವರು ಅತಿರೋಹಿತ ಜ್ಞಾನಿಗಳು. ಬ್ರಹ್ಮ, ವಾಯು, ಅವರ ಪತ್ನಿಯರಾದ ಸರಸ್ವತಿ, ಭಾರತಿ ಇವರುಗಳು ಈ ಬಗೆಯ ಜ್ಞಾನಿಗಳಾದುದರಿಂದ ಅವರುಗಳು ಪರಶುಕ್ಲತ್ರಯರೆಂದು ಹೇಳಲ್ಪಟ್ಟಿದ್ದಾರೆ.

ಬ್ರಹ್ಮಾಣಿ ಎಂಬಲ್ಲಿ:
ಬ್ರಹ್ಮ = ವೇದಗಳನ್ನು, ಣಯತಿ = ಹೊಂದಿಸುವವಳು (ಗಾಯತ್ರಿಯಾಗಿ)
„ ತಪಸ್ಸನ್ನು, „ „
„ ಪರಮಾತ್ಮನನ್ನು, ಜೀವರಿಗೆಹೊಂದಿಸುವಳು
ಬ್ರಹ್ಮಣಃ ಇಯಂ = ಚತುರ್ಮುಖನ ಪತ್ನಿಯಾದವಳು-
ಹೀಗೆಲ್ಲ ಅರ್ಥವಾಗುವುದು.

ಕೃತಿರಮಣ ಪ್ರದ್ಯುಮ್ನನಂದನೆ
ಚತುರವಿಂಶತಿತತ್ವಪತಿ ದೇ-
ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ ।

**ಸತತ ಹರಿಯಲಿ ಗುರುಗಳಲಿ ಸ-**
**ದ್ರತಿಯ ಪಾಲಿಸಿ ಭಾಗವತ ಭಾ-**
**ರತಪುರಾಣರಹಸ್ಯ ತತ್ವಗಳರುಪು ಕರುಣದಲಿ ||೬||**

ಸ. ಅ :– ಕೃತಿದೇವಿಯ ಪತಿಯಾದ ಪ್ರದ್ಯುಮ್ನದೇವನ ಪುತ್ರಿಯೆ, ಇಪ್ಪತ್ತುನಾಲ್ಕು ತತ್ವಗಳಿಗೆ ಅಭಿಮಾನಿಗಳಾದ ದೇವತೆಗಳಿಗೆ ಗುರುವೆನಿಸಿಕೊಂಡಿರುವ ವಾಯುದೇವನ ನಿಯತ ಪತ್ನಿಯೆ (ಭಾರತಿಯೆ) ಯಾವಾಗಲೂ ಹರಿಯಲ್ಲೂ, ಗುರುಗಳಲ್ಲೂ ವಿಶೇಷಭಕ್ತಿಯಿರುವಂತೆ ಅನುಗ್ರಹಿಸಿ ಭಾಗವತ-ಭಾರತ ಪುರಾಣಗಳಲ್ಲಿ ಅಡಗಿರುವ ಗೂಢವಾದ ತತ್ವಗಳನ್ನು ಕೃಪೆಯಿಟ್ಟು ತಿಳಿಸು.

ವಿ. ವಿ :- ರಮಾದೇವಿಯು ಪ್ರದ್ಯುಮ್ನ ದೇವರ ಪತ್ನಿಯಾದಾಗ ಕೃತಿದೇವಿಯೆನಿಸಿಕೊಂಡಳು.

'ಚತುರವಿಂಶತಿ ತತ್ವಪತಿ ದೇವತೆಗಳಿಗೆ':-ಈ ೨೪ ತತ್ವಗಳು ಅವುಗಳ ಅಭಿಮಾನಿಗಳಾದ ಭಾರತಿ ಮತ್ತು ಸರಸ್ವತಿಗಳ ಜತೆಯಲ್ಲಿ ಲಕ್ಷ್ಮಿಯನ್ನೂ ಕೆಲವರು ಹೇಳುವರು. ಅದರೆ ಮಾರುತನಿಗಿಂತ ಉನ್ನತ ಸ್ಥಾನಾಪನ್ನಳಾದ ಲಕ್ಷ್ಮಿಗೆ ಮಾರುತನು ಗುರುವೆನ್ನುವುದು ಹೊಂದಿಕೆಯಾಗದುದರಿಂದ ಆಕೆಯನ್ನು ಸೇರಿಸಿಲ್ಲ.

| | | | |
|---|---|---|---|
| ೧. | ಅವ್ಯಕ್ತತತ್ವ | ಅಭಿಮಾನಿದೇವತೆಗಳು | ಭಾರತಿ ಮತ್ತು ಸರಸ್ವತಿ |
| ೨. | ಮಹತ್ತತ್ವ | ” | ಬ್ರಹ್ಮ ಮತ್ತು ವಾಯು |
| ೩. | ಅಹಂಕಾರತತ್ವ | ” | ಗರುಡ, ಶೇಷ, ರುದ್ರರು |
| ೪. | ಮನಸ್ತತ್ವ | ” | ಇಂದ್ರ ಮತ್ತು ಕಾಮದೇವ |
| ೫. | ಶ್ರೋತ್ರತತ್ವ | ” | ಇಂದ್ರಾದಿ ದಿಗ್ದೇವತೆಗಳು, ಚಂದ್ರಮನು |
| ೬. | ತ್ವಕ್ತತ್ವ | ” | ಅಹಂಕಾರಿಕ ಪ್ರಾಣನು |
| ೭. | ಚಕ್ಷುಸ್ತತ್ವ | ” | ಸೂರ್ಯ |
| ೮. | ಜಿಹ್ವಾತತ್ವ | ” | ವರುಣ |
| ೯. | ಘ್ರಾಣತತ್ವ | ” | ಅಶ್ವಿನಿದೇವತೆಗಳು |
| ೧೦. | ವಾಕ್‌ತತ್ವ | ” | ಅಗ್ನಿ |
| ೧೧. | ಪಾಣಿತತ್ವ | ” | ಶಚಿ,ರತಿ,ಅನಿರುದ್ಧ,ಸ್ವಾಯಂಭುವಮನು, ದಕ್ಷ, ಬೃಹಸ್ಪತಿ |
| ೧೨. | ಪಾದತತ್ವ | ” | ಜಯಂತ |
| ೧೩. | ಪಾಯುತತ್ವ | ” | ಮಿತ್ರ |
| ೧೪. | ಉಪಸ್ಥತತ್ವ | ” | ವಿಶ್ವಾಮಿತ್ರ, ವಶಿಷ್ಠ, ಅತ್ರಿ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು ಅಂಗಿರಾ, ವೈವಸ್ವತಮನು |
| ೧೫. | ಶಬ್ದತತ್ವ | ... | ಬೃಹಸ್ಪತಿ |

೧೬. ಸ್ಪರ್ಶತತ್ವ ... ಅಪಾನ
೧೭. ರೂಪತತ್ವ ... ವ್ಯಾನ
೧೮. ರಸತತ್ವ ... ಉದಾನ
೧೯. ಗಂಧತತ್ವ ... ಸಮಾನ
೨೦. ಆಕಾಶತತ್ವ ... ಗಣಪತಿ
೨೧ ವಾಯುತತ್ವ ... (ಜಡ) ವಾಯು
೨೨. ತೇಜಸ್ತತ್ವ ... ಅಗ್ನಿ
೨೩. ಜಲತತ್ವ ... ವರುಣ
೨೪. ಪೃಥ್ವೀತತ್ವ ... ಧರಾದೇವಿ

ಈ ೨೪ ತತ್ವಾಭಿಮಾನಿಗಳಾದ ದೇವತೆಗಳ ಅಂತರ್ಗತನೂ, ನಿಯಾಮಕನೂ ಆಗಿರುವುದರಿಂದ ಮಾರುತನು ಗುರುವೆನಿಸಿಕೊಂಡಿದ್ದಾನೆ. ಮಾರುತನ ಚಲನವಿಲ್ಲದಿದ್ದಲ್ಲಿ ಈ ಅಭಿಮಾನಿ ದೇವತೆಗಳು ಜೀವಿಗಳಲ್ಲಿ ಏನೊಂದು ಪರಿಣಾಮವನ್ನೂ ಉಂಟುಮಾಡಲಾರರಾದುದರಿಂದಲೇ 'ವಾಯುರ್ಹಿ ಸರ್ವ ಜೀವಾನಾಂ' ಎಂಬ ವಚನವು ಹೊರಟಿರುವುದು.

**ವೇದಪೀಠ ವಿರಂಚಿ ಭವ ಶ-**
**ಕ್ರಾದಿಸುರ ವಿಜ್ಞಾನದಾಯಕ**
**ನೋದ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ।**
**ಛೇದಭೇದವಿಷಾದಕುಟಿಲಾಂ**
**ತಾದಿ ಮಧ್ಯವಿದೂರ ಆದಾ**
**ನಾದಿ ಕಾರಣ ಬಾದರಾಯಣ ಪಾಹಿ ಸತ್ರಾಣ ॥೭॥**

ಸ. ಅ :- ಯೋಗಾಸನಾ ರೂಢನೇ, ಬ್ರಹ್ಮ ರುದ್ರ ಇಂದ್ರಾದಿ ದೇವತೆಗಳಿಗೆ ವಿಶೇಷ ಜ್ಞಾನವನ್ನು ಕೊಡುವವನೇ, ಜ್ಞಾನಾನಂದಮಯ ದೇಹಿಯೇ, ಲೋಕವನ್ನು ಪಾವನಗೊಳಿಸತಕ್ಕ ಒಳ್ಳೆಯ ಆತ್ಮಕಥೆಯನ್ನುಳ್ಳವನೇ, ಕತ್ತರಿಸಲೂ, ಭೇದಿಸಲೂ ಆಗದ, ವ್ಯಸನಕ್ಕೆ ಸಿಲುಕದ, ಅಂಗವಿಕಲತೆಗೆ ಒಳಗಾಗದ, ಹುಟ್ಟು, ರಕ್ಷಣೆ, ನಾಶಾದಿಗಳಿಂದ ಹೊರಗಿರುವ ಶರೀರಿಯೇ; ಸೃಷ್ಟಿ, ಸ್ಥಿತಿ: ಲಯಕಾರಣನೇ; ಬದರೀವನದಲ್ಲಿ ನೆಲಸಿರುವ ಬಾದರಾಯಣನೇ, (ವೇದವ್ಯಾಸನೇ) ಸತ್ಪುರುಷರ ರಕ್ಷಕನೇ, ಕಾಪಾಡು.

ವಿ. ವಿ :- ವೇದಪೀಠ-ವೇದಕ್ಕೆ ಸನ್ನಹನ, ಉಪಾಯ, ಧ್ಯಾನ, ಸಂಗತಿಯುಕ್ತ ಎಂಬ ಅರ್ಥವುಂಟು. ಪ್ರಕೃತವೇದ-ಉಪಾಯವೆಂದರೆ ಯೋಗ. ಈ ಯೋಗವೇ ಪೀಠ ಎಂದರೆ ಯೋಗಾಸನಾರೂಢನು.

'ವಿರಿಂಚಿ ಭವ ಶಕ್ರಾದಿಸುರ ವಿಜ್ಞಾನದಾಯಕ' ಎಂಬ ಪ್ರಯೋಗದಿಂದ ವೇದವ್ಯಾಸರು ಸಾಮಾನ್ಯ ಋಷಿಗಳಲ್ಲವೆಂದೂ, ಅತ್ಯಂತ ಮೇಲ್ಪಟ್ಟವರೆಂದೂ ಬೋಧವಾಗುತ್ತದೆ.

ಆದಾನಾದಿಕಾರಣ :- ಆ = ಉತ್ಪತ್ತಿ, ದಾ = ಸ್ಥಿತಿ, ನ = ಸಂಹಾರ ಇವುಗಳಿಗೆ ಆದಿಕಾರಣ = ಮೂಲಕಾರಣನು.

**ಕ್ಷಿತಿಯೊಳಗೆ ಮಣಿಮಂತ ಮೊದಲಾ**
**ದತಿದುರಾತ್ಮರು ಒಂದಧಿಕ ವಿಂ**
**ಶತಿ ಕುಭಾಷ್ಯವ ರಚಿಸೆ ನಡುಮನೆಯೆಂಬ ಬ್ರಾಹ್ಮಣನ ।**
**ಸತಿಯ ಜಠರದೊಳವತರಿಸಿ ಭಾ**
**ರತಿರಮಣ ಮಧ್ವಾಭಿಧಾನದಿ**
**ಚತುರದಶಲೋಕದಲಿ ಮೆರೆದಪ್ರತಿಮಗೊಂದಿಸುವೆ ॥೮॥**

ಸ. ಅ :- ಭೂಮಿಯಲ್ಲಿ ಮಣಿಮಂತನೇ* ಮೊದಲಾದ ಬಹು ಕೆಟ್ಟಸ್ವಭಾವದವರು ಬ್ರಹ್ಮಸೂತ್ರಭಾಷ್ಯಕ್ಕೆ ಹೊಂದಿಕೆಯಾಗದ ಇಪ್ಪತ್ತೊಂದು ಭಾಷ್ಯಗಳನ್ನು ರಚಿಸಲು ಮಧ್ಯಗೇಹಭಟ್ಟರ ಪತ್ನಿಯ ಉದರದಲ್ಲಿ ವಾಯುದೇವನು ಅವತರಿಸಿ ಮಧ್ವಾಚಾರ್ಯನೆಂಬ ಹೆಸರಿನಲ್ಲಿ ಹದಿನಾಲ್ಕು ಲೋಕಗಳಲ್ಲೂ ಕೀರ್ತಿವಂತನಾದ ಅಸಾಮಾನ್ಯನಾದವನಿಗೆ (ಆ ಗುರುಶ್ರೇಷ್ಠನಿಗೆ) ನಾನು ನಮಸ್ಕರಿಸುತ್ತೇನೆ.

ವಿ. ವಿ :- ಒಂದಧಿಕವಿಂಶತಿಕುಭಾಷ್ಯ ರಚನಕಾರರು:- ೧) ಭಾರತೀ ವಿಜಯ, ೨) ಸಚ್ಚಿದಾನಂದ ಭಟ್ಟ, ೩) ಬ್ರಹ್ಮಘೋಷ, ೪) ಶತಾನಂದ, ೫) ಉದ್ಧತ, ೬) ವಿಜಯ ೭) ರುದ್ರಭಟ್ಟ, ೮) ವಾಮನ, ೯) ಯಾದವಪ್ರಕಾಶ, ೧೦) ರಾಮಾನುಜ, ೧೧) ಭರ್ತೃಪ್ರಪಂಚ, ೧೨) ದ್ರಮಿಡ, ೧೩) ಬ್ರಹ್ಮದತ್ತ, ೧೪) ಭಾಸ್ಕರ, ೧೫) ವಿಶಾರದ, ೧೬) ವೃತ್ತಿಕಾರಕ, ೧೭) ಜಯಭಟ್ಟ, ೧೮) ವಿಷ್ಣುಕ್ರಾಂತ, ೧೯) ವಾದೀಂದ್ರ, ೨೦) ಮಾಧವಭಟ್ಟ, ೨೧) ಸಂಕರ-ಇವರುಗಳು.

ಚತುರದಶಲೋಕಗಳು :- ಭೂರ್, ಭುವರ್, ಸ್ವರ್, ಮಹರ್, ಜನಂ, ತಪಂ, ಸತ್ಯಮ್ ಇವೇಳು ಮೇಲಿನ ಲೋಕಗಳು, ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ ಮತ್ತು ಪಾತಾಲ ಇವೇಳೂ ಅಧೋಲೋಕಗಳು. ಹೀಗೆ ಒಟ್ಟು ಹದಿನಾಲ್ಕು ಲೋಕಗಳು.

ಮಧ್ವಾಚಾರ್ಯರ ಜನನವು ಎಲ್ಲರಂತೆ ಶುಕ್ಲ-ಶೋಣಿತ ಸಂಪರ್ಕಾದಿಗಳಿಂದ ಉತ್ಪನ್ನವಾಗಿ ಗರ್ಭಯಾತನಾದಿಗಳನ್ನು ಅನುಭವಿಸಿಯಲ್ಲ. ಸ್ವಾಭಾವಿಕವಾಗಿ ಎಲ್ಲರಂತೆ ಜನಿಸಿದ ಕೂಸಿನ ದೇಹದೊಳಗಿನ ಜೀವವನ್ನು ಹೊರಗೋಡಿಸಿ ವಾಯುದೇವನು ಆ ದೇಹದೊಳಕ್ಕೆ ಪ್ರವೇಶಿಸಿ ನಿಂತುದರಿಂದ ಆದುದು.

*ಮಣಿಮಂತನೆಂಬುವನು ಒಬ್ಬ ರಾಕ್ಷಸ. ದ್ವಾಪರದಲ್ಲಿ ಭೀಮಸೇನನು ಸೌಗಂಧಿಕಾ ಪುಷ್ಪವನ್ನು ತರಲು ಹೋದಾಗ ಅವನೊಂದಿಗೆ ಹೋರಾಡಿ ಯುದ್ಧದಲ್ಲಿ ಅಸು ನೀಗಿದವನು. [ಭಾ. ವನ. ೧೬೦] ಆ ಅಪಜಯದ ಅವಮಾನದಿಂದ ಕಲಿಯುಗದಲ್ಲಿ ಜನ್ಮವೆತ್ತಿ ಬ್ರಹ್ಮಸೂತ್ರಕ್ಕೆ ಭಾಷ್ಯಬರೆದು ಮತ್ತೆ ಮಧ್ವಾಚಾರ್ಯರಿಂದ ಖಂಡಿಸಲ್ಪಟ್ಟನೆಂದು ಭಾವವು.

ಪಂಚಭೇದಾತ್ಮಕ ಪ್ರಪಂಚಕೆ
ಪಂಚರೂಪಾತ್ಮಕನೆ ದೈವತ
ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ ।
ಪಂಚವಿಂಶತಿತತ್ವತರತಮ
ಪಂಚಿಕೆಗಳನು ಪೇಳ್ದ ಭಾವಿ ವಿ
ರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವು ॥೯॥

ಸ. ಅ :- ಐದು ಬಗೆಯ ಭೇದಗಳನ್ನು ಹೊಂದಿರುವ ಈ ಪ್ರಪಂಚಕ್ಕೆ ಐದು ರೂಪಗಳನ್ನು ತಾಳಿರುವ ಪರಮಾತ್ಮನೇ ದೈವವು. ಪಂಚಮುಖ ರುದ್ರ ಮತ್ತು ಇಂದ್ರ ಮೊದಲಾದವರೆಲ್ಲ ಹರಿಯ ಸೇವಕರು. ಇಪ್ಪತ್ತೈದು ತತ್ವಗಳನ್ನೂ, ದೇವತೆಗಳಲ್ಲಿ ತರ-ತಮಭಾವದ ಹಂಚಿಕೆಗಳನ್ನು ಉಪದೇಶಿಸಿದ ಮತ್ತು ಮುಂದೆ (ಬ್ರಹ್ಮಕಲ್ಪದಲ್ಲಿ) ಬ್ರಹ್ಮಪದವಿಯನ್ನು ವಹಿಸಿಕೊಳ್ಳಲು ಸಿದ್ಧರಾಗಿರುವ ಶ್ರೀಮದಾಂದತೀರ್ಥರನ್ನು ದಿನಂಪ್ರತಿ ಸ್ಮರಿಸುತ್ತೇನೆ.

ವಿ. ವಿ :- ಪಂಚ ಭೇದಾತ್ಮಕ ಪ್ರಪಂಚ :-

೧) ಜೀವೇಶ್ವರಭೇದ, ೨) ಜಡೇಶ್ವರಭೇದ, ೩) ಜಡಜೀವಭೇದ, ೪) ಜೀವಜೀವಭೇದ ೫) ಜಡಜಡಭೇದ—ಹೀಗೆ ಜೀವೇಶ್ವರಭೇದ ಪಂಚಕಗಳು ಈ ಲೋಕದಲ್ಲುಂಟು.

ಪಂಚರೂಪಾತ್ಮಕ ದೈವತ:-

೧) ಅನಿರುದ್ಧ, ೨) ಪ್ರದ್ಯುಮ್ನ, ೩) ಸಂಕರ್ಷಣ, ೪) ವಾಸುದೇವ, ೫) ನಾರಾಯಣ ಈ ರೂಪಗಳನ್ನು ತಾಳಿದ ಪರಮಾತ್ಮ.

ಪಂಚವಿಂಶತಿ ತತ್ವಗಳು :-

ಪೃಥ್ವಿವ್ಯಾದಿ ಪಂಚಮಹಾಭೂತಗಳು ೫, ತನ್ಮಾತ್ರಾ ಶಬ್ದಾದಿಗಳು ೫, ಕೈಮೊದಲಾದ ಪಂಚಕರ್ಮೇಂದ್ರಿಯಗಳು ೫, ಕಣ್ಣು ಮೊದಲಾದ ಪಂಚಜ್ಞಾನೇಂದ್ರಿಯಗಳು ೫, ಅಹಂಕಾರ, ಮನಸ್ಸು, ಬುದ್ಧಿ, ಚಿತ್ತ ಹೀಗೆ ೨೪ ತತ್ವಗಳು, [ಈ ಅಂಶಗಳನ್ನು ಈ ಹಿಂದೆ ವಿವರಿಸಲಾಗಿದೆ] ಪರಮಾತ್ಮನೂ ಸೇರಿ ೨೫ ತತ್ವಗಳಾದುವು.

ತರತಮ ಪಂಚೀಕರಣ:

೧. ಹರಿಯೇ ಸರ್ವೋತ್ತಮನು
೨. ಪತ್ನಿ ರಮಾದೇವಿಯು ಹರಿಗಿಂತ ಬಹುಗುಣ ಕಡಿಮೆಯವಳು
೩. ಮಹತ್ತತ್ವಾಭಿಮಾನಿ ಚತುರ್ಮುಖ ಬ್ರಹ್ಮ, ವಿಜ್ಞಾನ ತತ್ವಾಭಿಮಾನಿ ವಾಯು ಇವರು ರಮಾದೇವಿಗಿಂತ ಕೋಟಿ ಗುಣ ಕಡಿಮೆಯವರು.

೪. ವೇದಾಭಿಮಾನಿ ಸರಸ್ವತಿ, ಭಕ್ತ್ಯಭಿಮಾನಿ ಭಾರತಿ ಇವರೀರ್ವರೂ ತಮ್ಮ ತಮ್ಮ ಪತಿಗಳಿಗಿಂತ ನೂರುಗುಣಗಳು ಕಡಿಮೆಯವರು.

೫. ಕಾಲಾಭಿಮಾನಿ ಗರುಡ, ಜೀವಾಭಿಮಾನಿ ಶೇಷ, ಅಹಂಕಾರಾಭಿಮಾನಿ ರುದ್ರ, ಇವರುಗಳು ಸರಸ್ವತಿ, ಭಾರತಿಯರಿಗಿಂತ ೧೦೦ ಗುಣ ಕಡಿಮೆಯವರು.

೬. ಕ್ರಮವಾಗಿ ಇವರ ಪತ್ನಿಯರುಗಳಾದ ಸೌಪರ್ಣಿ, ವಾರುಣಿ, ಉಮಾದೇವಿಯರು ತಮ್ಮ ತಮ್ಮ ಪತಿಗಳಿಗಿಂತ ೧೦೦ ಗುಣ ಕಡಿಮೆಯವರು.

೭. ಐಶ್ವರ್ಯಾಭಿಮಾನಿ ಇಂದ್ರ, ಅವೈರಾಗ್ಯಾಧಿಪತಿ ಕಾಮ ಇವರುಗಳು ಬಹು ಕಡಿಮೆ ಗುಣವುಳ್ಳವರು. ಹೀಗೆ ತಾರತಮ್ಯ ಪಂಚೀಕರಣವು.

ಜಗತ್ತು ಸುಳ್ಳು, ದೇವರಿಗೆ ಜ್ಞಾನಾನಂದಾದಿಗಳಿಲ್ಲ. ಜೀವರಿಂದ ಭೇದವಿಲ್ಲ, ಜೀವ-ಜಡರಲ್ಲೂ ಭೇದವಿಲ್ಲ ಎಂಬ ಅಭಿಪ್ರಾಯಗಳನ್ನು ಖಂಡಿಸುವ ಈ ತಾರತಮ್ಯಾದಿ ವಿಭಜನೆಯೇ ಮಧ್ವಾಚಾರ್ಯರಿಂದ ಉಪದೇಶಿಸಲ್ಪಟ್ಟ ಅಂಶಗಳು. 'ಸತ್ಯಜಗಕಿದು ಪಂಚಭೇದವು' ಎಂಬ ರಚನೆಯಲ್ಲಿ ಪುರಂದರದಾಸರು ಈ ಅಂಶಗಳನ್ನು ವಿಶದೀಕರಿಸಿ ಹಾಡಿದ್ದಾರೆ.

**ವಾಮದೇವವಿರಿಂಚಿತನಯಉ**
**ಮಾಮನೋಹರ ಉಗ್ರ ಧೂರ್ಜಟಿ**
**ಸಾಮಜಾಜಿನವಸನಭೂಷಣ ಸುಮನಸೋತ್ತಂಸ ।**
**ಕಾಮಹರ ಕೈಲಾಸಮಂದಿರ**
**ಸೋಮಸೂರ್ಯಾನಲ ವಿಲೋಚನ**
**ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವ ॥೧೦॥**

ಸ. ಅ :- ಮನೋಹರನಾದ ಸುಂದರನಾದ ವಾಮದೇವನಾಮಕ ರುದ್ರನೆ, ಬ್ರಹ್ಮನ ಸುತನೆ, ಉಮಾದೇವಿಯ ಮನಸ್ಸನ್ನು ಆಕರ್ಷಿಸಿದವನೇ (ಉಮಾಪತಿಯೆ) ಭಯಂಕರನೆ, ಹೊಗೆಯ ಬಣ್ಣದ ಜಟಾಧಾರಿಯೆ, ಆನೆಯ ಚರ್ಮದ ವಸ್ತ್ರ ಭೂಷಣದಿಂದ ಅಲಂಕೃತನಾದವನೆ, ಇಂದ್ರಾದಿ ದೇವತೆಗಳಲ್ಲಿ ಶ್ರೇಷ್ಠನೆ, ಇಷ್ಟಾರ್ಥವನ್ನು ಕರುಣಿಸುವವನೆ, ನಮಗೆ ಸದಾ ಉತ್ತಮವಾದ ಮಂಗಳವನ್ನು (ಒಳ್ಳಿತನ್ನು) ಕರುಣಿಸು.

ವಿ. ವಿ :- <u>ವಾಮದೇವ</u>, ಶ್ರೀ ಪರಮಾತ್ಮನು ನಡುವೆ ಪಶ್ಚಿಮಾಭಿಮುಖವಾಗಿ ಕುಳಿತಿರಲು ರುದ್ರದೇವನು ಆ ಪರಮಾತ್ಮನ (ವಾಸುದೇವನ) ಹಿಂದುಗಡೆ ಬಲಭಾಗದ ಈಶಾನ್ಯ ಮೂಲೆಯಲ್ಲಿ ಪಶ್ಚಿಮಾಭಿಮುಖವಾಗಿಯೆ ಕುಳಿತು, ತನ್ನ ವಾಮ (ಎಡ) ಭಾಗಕ್ಕೆ ಆದ ಪರಮಾತ್ಮನನ್ನು ಯಥಾಶಕ್ತಿ ಭಕ್ತಿಯಿಂದ ಪೂಜಿಸುತ್ತಿರುವುದರಿಂದ ವಾಮದೇವನೆನ್ನಿಸಿಕೊಂಡಿದ್ದಾನೆ [ಗರುಡಪುರಾಣ, ಬ್ರಹ್ಮಕಾಂಡ]

ವಾಮಃ-ಸುಂದರಶ್ಚಾಸೌ ದೇವಶ್ಚ = ವಾಮದೇವಃ' [ಸುಂದರವಾದ ದೇವನು]
ಉಮಾ:-ಇದು ಪಾರ್ವತಿಯ ನಾಮಾಂತರ, ಪಾರ್ವತಿಯು ಶಂಕರನನ್ನು ಮೆಚ್ಚಿಸಲು ತಪಸ್ಸಿಗೆ ಹೊರಟಾಗ ತಾಯಿಯಾದ ಮೇನೆಯು (ಉ = ಎಲೌ, ಮಾ = ಬೇಡ) ಕಷ್ಟಕರವಾದ ತಪಸ್ಸಿಗೆ ತೊಡಗಬೇಡವೆಂದು ಹೇಳಿದಳಂತೆ, ಆಗಿನಿಂದ ಪಾರ್ವತಿಗೆ ಉಮಾ ಎಂಬ ಹೆಸರು ರೂಢಿಗೆ ಬಂದಿದೆ.

ಸಾಮಜಾಜಿನ ವಸನಭೂಷಣ:- [ಸಾಮಜ = ಆನೆಯ, ಅಜಿನ-ಚರ್ಮದ, ವಸನ-ಬಟ್ಟೆಯೆ, ಭೂಷಣ-ಒಡವೆ] ಮಹಿಷಾಸುರನ ಮಗ ಗಜಾಸುರನು ಒಬ್ಬ ಅರಸು. ಇವನು ಪರಮ ಶಿವಭಕ್ತ. ಶಂಕರನನ್ನು ಮೆಚ್ಚಿಸಿ ಅನೇಕ ವರಗಳನ್ನು ಪಡೆದುಕೊಂಡು ದೇವತೆಗಳನ್ನು ಪೀಡಿಸುತ್ತಿರಲು ಆ ಹಿಂಸೆಯನ್ನು ತಾಳಲಾರದೆ ದೇವತೆಗಳು ಶಿವನನ್ನೇ ಮರೆಹೊಕ್ಕರು. ಅನಿವಾರ್ಯವಾಗಿ ಈಶ್ವರನು ಅಸುರನ ಮೇಲೆ ಯುದ್ಧಕ್ಕೆ ನಿಲ್ಲಲು, ಗಜಾಸುರನು ತನ್ನ ಮರಣಾನಂತರ ತನ್ನ ದೇಹದ ಚರ್ಮವನ್ನು ಉಡುಗೆಯಾಗಿ ಉಪಯೋಗಿಸುವಂತೆ ಶಂಕರನನ್ನು ಪ್ರಾರ್ಥಿಸಿ ಯುದ್ಧದಲ್ಲಿ ಅಸುವನ್ನು ನೀಗಿದನು. ಕೊಟ್ಟಿದ್ದ ವಾಗ್ದಾನದಂತೆ ಶಂಕರನು ಅಸುರನ ದೇಹದ ಚರ್ಮವನ್ನು ಉಡಲಾರಂಭಿಸಲು ಸಾಮಜಾಜಿನವಸನಭೂಷಣನಾದನು.

**ಕೃತ್ತಿವಾಸನೆ ಹಿಂದೆ ನೀನಾ**
**ಲ್ವತ್ತು ಕಲ್ಪ ಸಮೀರನಲಿ ಶಿ-**
**ಷ್ಯತ್ವವಹಿಸ್ಯಖಿಲಾಗಮಾರ್ಥಗಳೋದಿ ಜಲಧಿಯೊಳು ।**
**ಹತ್ತು ಕಲ್ಪದಿ ತಪವ ಗೈದಾ-**
**ದಿತ್ಯರೊಳಗುತ್ತಮನೆನಿಸಿ ಪುರು**
**ಷೋತ್ತಮನ ಪರಿಯಂಕಪದವೈದಿದೆಯೊ ಮಹದೇವ ॥೧೧॥**

ಸ. ಅ :- ಹುಲಿಯ ಚರ್ಮವೇ ವಸ್ತ್ರವಾಗುಳ್ಳ ಮಹಾದೇವನೇ, ನೀನು ಈ ರುದ್ರ ಪದವಿಗೆ ಬರುವುದಕ್ಕೆ ಮುಂಚೆ ನಲವತ್ತು ಬ್ರಹ್ಮಕಲ್ಪಗಳ ಕಾಲ ವಾಯು ದೇವನಲ್ಲಿ ಶಿಷ್ಯತ್ವವನ್ನು ವಹಿಸಿ ಸಕಲ ವೇದಾದಿ ಸಚ್ಛಾಸ್ತ್ರಗಳನ್ನು ವ್ಯಾಸಂಗಮಾಡಿ ಮತ್ತೆ ಹತ್ತು ಕಲ್ಪದವರೆವಿಗೂ ಸಮುದ್ರದಲ್ಲಿ ಮುಳುಗಿ ತಪಸ್ಸುಮಾಡಿ ಆದಿತ್ಯರಲ್ಲಿ(ಅದಿತಿಯ ಮಕ್ಕಳಾದ ಇಂದ್ರಾದಿ ದೇವತೆಗಳಲ್ಲಿ) ಉತ್ತಮನೆನಿಸಿಕೊಂಡು ಕ್ರಮಶಃ ಪುರುಷ ಶ್ರೇಷ್ಠನಾದ ನಾರಾಯಣನಿಗೆ ಹಾಸಿಗೆಯಾಗಿ ಶೇಷನ ಪದವಿಯನ್ನು ಪಡೆದೆ. ಇಂತಹ ಮಹಿಮನಾದ ನೀನು ನಮಗೆ ಮಂಗಳವನ್ನು ಕರುಣಿಸು.

ವಿ. ವಿ :- ಕೃತ್ತಿವಾಸ = ಚರ್ಮವನ್ನೇ ವಸ್ತ್ರವಾಗಿ ಉಳ್ಳ (ಸಾಮಾನ್ಯಾರ್ಥ) ರುದ್ರ. ವ್ಯಾಘ್ರಚರ್ಮಾಂಬರಧರಂ- ಎಂಬುದು ಭಾಗವತ ಪ್ರಯೋಗ.

'ಉಟ್ಟುದು ಹುಲಿದೊಗಲು- ಬೆನ್ನ ಮೇಲೆ ಆನೆಯ ತೊಗಲು'- ಎಂದು ಶ್ರೀ ಪುರಂದರದಾಸರು ಹಾಡಿದ್ದಾರೆ. ಆದುದರಿಂದ ಈ ಚರ್ಮಗಳೇ ರುದ್ರನ ವಸ್ತ್ರ ಭೂಷಣಗಳು ಎನ್ನಬಹುದು.

'ಚತುರ್ಯುಗ ಸಹಸ್ರಾಣಿ- ಬ್ರಹ್ಮಣೋದಿವಮುಚ್ಯತೇ'- ಚತುರ್ಯುಗ ಗಳು ಒಂದು ಸಾವಿರಸಲ ಮರಳಿದಲ್ಲಿ. ಬ್ರಹ್ಮನಿಗೆ ಒಂದು ಹಗಲು ಕಲ್ಪೋಬ್ರಹ್ಮಣೋ ದಿವಸ ಇತಿ (ಸುಧಾ)- ಬ್ರಹ್ಮನ ಒಂದು ದಿವಸವು ಒಂದು ಕಲ್ಪ.

ಬ್ರಹ್ಮಕಲ್ಪದ ಪ್ರಾರಂಭದಿಂದ ಒಂದುನೂರು ಕಲ್ಪಗಳು ಸಾಧನೆಯಲ್ಲಿ ಕಳೆದ ಋಜುವು ಮುಂದೆ ಕಲ್ಕಿ, ಸುತೇಜ, ದಾಸ . . . ಗವ್ಯ - ಮೊದಲಾಗಿ ೯೭ ಕಲ್ಪಗಳು ೯೭ ಹೆಸರಿನಿಂದ ಸಾಧನೆ ಮಾಡಿ ೯೮ ನೆಯ ಕಲ್ಪದಲ್ಲಿ ಲಾತವ್ಯ ನಾಮಕ ಋಜುಗಣ ಪುಂಗವನಾಗುವನು. ಈತನ ಮುಂದೆ ವಾಯು ಮತ್ತು ಬ್ರಹ್ಮ ಮಾತ್ರ ಇರುವರು. ಗರುಡ. ಶೇಷ, ರುದ್ರರುಗಳಿಗೆ ೧೦೦ ಬ್ರಹ್ಮಕಲ್ಪಸಾಧನೆಯು ಹೇಳಲ್ಪಟ್ಟಿದೆ. ಶ್ರೀ ವಿಜಯದಾಸರೂ ತಮ್ಮ ಸಾಧನಾ ಕಲ್ಪ ಸುಳಾದಿಯಲ್ಲಿ ರುದ್ರಾದಿಗಳಿಗೆ ೧೦೦ ಕಲ್ಪಸಾಧನವೆಂದಿದ್ದಾರೆ.

ಶ್ರೀ ಜಗನ್ನಾಥದಾಸರು ರುದ್ರಾದಿಗಳಿಗೆ ಪ್ರಾರಬ್ಧ ಸಂಕ್ಷಯವಾದ ಮೇಲೆ ಮತ್ತೆ ಐದಲೆಗೆ (ಪಂಚಮುಖ ರುದ್ರನಿಗೆ) ಐವತ್ತು ಕಲ್ಪವೆಂದು ಹೇಳಿದ್ದಾರೆ. ಆದುದರಿಂದ ರುದ್ರಪದವಿಗೆ ಬರುವುದಕ್ಕೆ ಮುಂಚೆ ಹಿಂದಿನ ೯೮ ನೇ ಬ್ರಹ್ಮಕಲ್ಪದಲ್ಲಿಯೇ ಉಗ್ರತಪೋ ಎಂಬ ನಾಮದಿಂದ ಲಾತವ್ಯನಾಮಕ ಋಜುಗಣಪುಂಗವರಲ್ಲಿ ಅನಂತ ವೇದಾರ್ಥಗಳನ್ನು ೭೫ ಬ್ರಹ್ಮವರ್ಷಗಳು ಶ್ರವಣ, ಮನನ ಮಾಡಿ ಅನಂತರ ಬ್ರಹ್ಮದೇವರ ದಿನ ಕಲ್ಪದಲ್ಲಿ ೪೦ ಕಲ್ಪಗಳ ಕಾಲ ವಾಯುದೇವರಲ್ಲಿ ಶಿಷ್ಯತ್ವವನ್ನು ವಹಿಸಿ ಆ ನಿಯತ ಗುರುಗಳಲ್ಲಿ ಮನನ ಮಾಡಿ ಮುಂದೆ ಹತ್ತು ಮನುಕಲ್ಪಗಳ ಕಾಲ [ಶ್ರೀ ವಿಜಯದಾಸರು ಉಪಾಸನಾ ಭಾಗ ಸುಳಾದಿಯಲ್ಲಿ ಮನುಜನರಿಗೆ ಮನುಷ್ಯಮಾನದಿಂದ ४೦೦ ವರ್ಷಗಳು ಎಂದು ಹೇಳಿದ್ದಾರೆ.] ಲವಣಸಮುದ್ರದಲ್ಲಿ ಮುಳುಗಿ ಧ್ಯಾನೋಪಾಸನೆಗಳಿಂದ ತಪಸ್ಸು ಮಾಡಿ ದೇವತೆಗಳಲ್ಲಿ ಉತ್ತಮನೆನಿಸಿ ರುದ್ರಪದವನ್ನು ಹೊಂದಿ ೧೦೦ನೆಯ ಕಲ್ಪದಲ್ಲಿ ಪುರುಷೋತ್ತಮನ ಪರ್ಯಂಕಶೇಷನ ಪದವನ್ನು ಹೊಂದುತ್ತಾರೆಂದು ರುದ್ರದೇವರ ಸಾಧನಾವಿವರವು ಹೇಳಲ್ಪಟ್ಟಿದೆ.

**ಪಾಕಶಾಸನ ಮುಖ್ಯ ಸಕಲದಿ–**
**ವೌಕಸರಿಗಭಿನಮಿಪೆ ಋಷಿಗಳಿ**
**ಗೇಕಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ।**
**ಆ ಕಮಲನಾಭಾದಿ ಯತಿಗಳ–**
**ನೀಕಕಾನಮಿಸುವೆನು ಬಿಡದೆ ರ–**
**ಮಾಕಳತ್ರನ ದಾಸವರ್ಗಕೆ ನಮಿಪೆನನವರತ ||೧೨||**

ಸ. ಅ :- ಇಂದ್ರನೇ ಮೊದಲಾದ ಎಲ್ಲ ದೇವತೆಗಳಿಗೂ ವಂದಿಸುತ್ತೇನೆ. ಒಂದೇ ಮನಸ್ಸಿನಿಂದ ಋಷಿಗಳಿಗೂ, ಪಿತೃಗಳಿಗೂ, ಗಂಧರ್ವರಿಗೂ, ದೊರೆಗಳಿಗೂ, ಪದ್ಮನಾಭತೀರ್ಥರೇ ಮೊದಲಾದ ಯತಿಶ್ರೇಷ್ಠರ ಗುಂಪಿಗೂ ನಮಸ್ಕರಿಸುತ್ತೇನೆ. ರಮಾದೇವಿಯನ್ನೇ ಪತ್ನಿಯನ್ನಾಗಿ ಉಳ್ಳ ಶ್ರೀಮನ್ನಾರಾಯಣನ ಭಕ್ತರ ಸಮೂಹಕ್ಕೆಲ್ಲ ಸದಾ ನಮಸ್ಕರಿಸುತ್ತೇನೆ.

ವಿ. ವಿ :- ಪಾಕಶಾಸನ ಪಾಕನೆಂಬುವನೊಬ್ಬ ರಾಕ್ಷಸ. ಆತನನ್ನು ವಧಿಸಿ ಇಂದ್ರನು ಪಾಕಶಾಸನನೆನ್ನಿಸಿಕೊಂಡನು. ಇವರೇ ಮುಖ್ಯದಿವೌಕಸರು - ಇಂದ್ರ, ಕಾಮ, ಅನಿರುದ್ಧ ನಾಮಕಪ್ರಾಣ, ಶಚಿ, ರತಿ, ಗುರು, ಸೂರ್ಯ, ಚಂದ್ರ. ವರುಣಾದಿ ದೇವತೆಗಳು. ಋಷಿಗಳು:- ನಾರದ, ಭೃಗು, ಅಗ್ನಿ, ಪ್ರಸೂತಿ, ವಿಶ್ವಾಮಿತ್ರ, ಮರೀಚಿ ಮೊದಲಾದವರು.

ಕಮಲನಾಭಾದಿಯತಿಗಳನೀಕ-ಪದ್ಮನಾಭಂ ನರಹರಿಮುನಿಪಂಮಾಧವಾಕ್ಷೋಭ್ಯ ತೀರ್ಥಂ-ಹೀಗೆ ರಾಘವೇಂದ್ರರ ಪರ್ಯಂತದ ಎಲ್ಲ ಯತಿಶ್ರೇಷ್ಠರು.

ರಮಾಕಳತ್ರನ ದಾಸವರ್ಗ-ರಮಾಪತಿಯಾದ ಪರಮಾತ್ಮನ ಸೇವಕವರ್ಗಜಗತ್ಕುಟುಂಬಿಯಾದ ಸ್ವಾಮಿಯ ಗೃಹಸ್ಥಾಶ್ರಮಕ್ಕೆ ದಾಸವರ್ಗವು ಅವಶ್ಯಕವಷ್ಟೆ ? ಪ್ರಕೃತ ದಾಸರೆಂದರೆ ಭಕ್ತರುಗಳು. ಭಗವಂತನಿಗೆ ಭಕ್ತರಲ್ಲಿ ಅಪಾರಪ್ರೇಮ. ಆದುದರಿಂದ 'ಮದ್ಭಕ್ತಾಯತ್ರಗಾಯನ್ತಿತತ್ರತಿಷ್ಠಾಮಿ'- ಎಂದು ಹೇಳಿರುವುದು. ಇಂತಹ ಭಗವಂತನನ್ನು ತಮ್ಮ ಭಕ್ತಿಗಾನದಿಂದ ಸೇವಿಸಿ ಕೃತಾರ್ಥರಾದ ಪುರಂದರ, ವಿಜಯ, ಗೋಪಾಲಾದಿ ದಾಸಮುಖ್ಯರು.

**ಪರಿಮಳವು ಸುಮನದೊಳಗನಲನು**
**ಅರಣಿಯೊಳಗಿಪ್ಪಂತೆ ದಾಮೋ**
**ದರನು ಬ್ರಹ್ಮಾದಿಗಳಮನದಲಿ ತೋರಿ ತೋರದಲೆ ।**
**ಇರುತಿಹ ಜಗನ್ನಾಥ ವಿಠಲನ**
**ಕರುಣ ಪಡೆವ ಮುಮುಕ್ಷುಜೀವರು**
**ಪರಮಭಾಗವತರನು ಕೊಂಡಾಡುವುದು ಪ್ರತಿದಿನವು ॥೧೩॥**

ಸ. ಅ :- ಸುವಾಸನೆಯು ಹೂವಿನಲ್ಲೂ, ಬೆಂಕಿಯು ಅರಣಿ ಎಂಬ ಕಟ್ಟಿಗೆಯ ಒಳಗೂ ಹುದುಗಿ ಇರುವಂತೆ ದಾಮೋದರನು ಬ್ರಹ್ಮನೇ ಮೊದಲಾದವರ ಮನಸ್ಸಿನಲ್ಲಿ ಕಂಡೂ ಕಾಣದಂತೆ ವ್ಯಾಪ್ತನಾಗಿರುತ್ತಾನೆ. ಜಗನ್ನಾಥವಿಠಲನ ಕರುಣೆಯನ್ನು ಕೋರುವ ಮೋಕ್ಷಾಪೇಕ್ಷಿಗಳಾದ ಜೀವರುಗಳು ಪರಮ ಭಾಗವತರುಗಳನ್ನು ದಿನಂಪ್ರತಿ ಸ್ತೋತ್ರ ಮಾಡುವುದು.

ವಿ. ವಿ:- ಅರಣಿ: ಇದು ಯಜ್ಞಯಾಗಾದಿ ಕಾರ್ಯಗಳನ್ನು ಮಾಡಲು ಬೇಕಾಗುವ ಅಗ್ನಿಯನ್ನು ಉತ್ಪತ್ತಿ ಮಾಡಿಕೊಳ್ಳಲು ಉಪಯೋಗಿಸುವ ಅಶ್ವತ್ಥ ಕಾಷ್ಠದಿಂದ ಮಾಡಿಕೊಂಡಿರುವ ಸಾಧನ. ಈ ಸಾಧನಗಳೆರಡನ್ನು ಪರಸ್ಪರ ಮಥಿಸುವುದರಿಂದ ಅಗ್ನಿಯು ಉತ್ಪನ್ನವಾಗುವುದು.

ದಾಮೋದರಃ :-

ದಮಃ ಬಹಿರಿಂದ್ರಿಯ ನಿಗ್ರಹಃ; ತಜ್ಜನ್ಯೋ ದಾಮಃ-ಹೀಗೆ ಇಂದ್ರಿಯ ನಿಗ್ರಹವೇ ಮೊದಲಾದ ಸಾಧನಗಳಿಂದ ಸಾಧಿಸುವ ಪರಿಶುದ್ಧವಾದ ಜ್ಞಾನದಿಂದ ಹೊಂದಲ್ಪಡಬೇಕಾದವನಾದುದರಿಂದ ಪರಮಾತ್ಮನು ದಾಮೋದರನು.

'ಯಶೋದಯಾ ದಾಮ್ನಾ ಉದರೇ ಬದ್ಧ ಇತಿ ದಾಮೋದರಃ'- ಬಾಲ ಸಹಜ ಚೇಷ್ಟೆಯನ್ನು ನಿರೋಧಿಸಲು ಯಶೋದೆಯು ಬಾಲಕೃಷ್ಣನ ಸೊಂಟಕ್ಕೆ ಹಗ್ಗ ಕಟ್ಟಿ ಒರಳಿಗೆ ಬಿಗಿದಿರಲು ಆ ಕಲ್ಲನ್ನೇ ಎಳೆದುಕೊಂಡು ಹೋಗಿ ಶಾಪದಿಂದ ಮತ್ತೀಮರಗಳಾಗಿ ನಿಂತಿದ್ದ ಇಬ್ಬರು ಗಂಧರ್ವರ ನಡುವೆ ನುಸುಳಲು ಆ ಮರಗಳು ಮುರಿದು ಗಂಧರ್ವರು ಶಾಪವಿಮೋಚಿತರಾಗಿ ಅಂತರ್ಧಾನರಾದರು. ಅಂದಿನಿಂದ ಕೃಷ್ಣನು 'ದಾಮೋದರ ನಾಮಕನು' ಆದನು.

ದಾಮೋದರನು........ ತೋರಿ ತೊರದಲೆ:-

ಬ್ರಹ್ಮ ಮತ್ತು ವಾಯು ಇವರಿಗೆ ಅಪರೋಕ್ಷದಲ್ಲಿ ಸರ್ವದಾ, ರುದ್ರಾದಿಗಗಳಿಗೆ ಧ್ಯಾನಕಾಲದಲ್ಲಿ ಮಾತ್ರ ಹೀಗೆಯೇ ತಾರತಮ್ಯಾನುಸಾರ ಕಾಣಿಸಿಕೊಳ್ಳುವ ಪರಮಾತ್ಮನ ಅನುಗ್ರಹವನ್ನು ಆಶಿಸುವ ಮುಮುಕ್ಷುಗಳಾದ ಜೀವರುಗಳು ರಮಾ,ಬ್ರಹ್ಮಾದಿಗಳಿಂದ ಮಾನವೋತ್ತಮರವರಿವಿಗೆ ತಾರತಮ್ಯ ಕ್ರಮದಲ್ಲಿ ಭಜಿಸಿ, ನಮಸ್ಕರಿಸಿ ಅನುಗ್ರಹಗಳಿಸಬೇಕೆಂದು ಶ್ರೀ ಜಗನ್ನಾಥದಾಸರು ಉಪದೇಶಿಸಿದ್ದಾರೆ.

ಹರಿಕಥಾಮೃತಸಾರದ ಮಂಗಳಾಚರಣ ಸಂಧಿ ಮುಗಿಯಿತು.

**ಏಕದಂತ ಇಭೇಂದ್ರ ಮುಖ ಚಾ-**
**ಮೀಕರಕೃತ ಭೂಷಣಾಂಗ ಕೃ-**
**ಪಾಕಟಾಕ್ಷದಿ ನೋಡು ವಿಜ್ಞಾಪಿಸುವೆಯನಿತೆಂದು ।**
**ನೋಕನೀಯನ ತುತಿಸುತಿಪ್ಪ ವಿ-**
**ವೇಕಿಗಳ ಸಹವಾಸ ಸುಖಗಳ**
**ನೀ ಕರುಣಿಸುವುದೆಮಗೆ ಸಂತತ ಪರಮಕರುಣಾಳು ॥೧೪॥**

ಸ. ಅ :- ಒಂದೇ ಹಲ್ಲು, ಗಜರಾಜನಮುಖ, ಚಿನ್ನದಿಂದ ಮಾಡಿದ ಅಲಂಕಾರ ಭೂಷಿತ ಶರೀರವುಳ್ಳ (ಎಲೈ ಗಣಪತಿಯೇ) ದೇವನೆ ಕೃಪಾದೃಷ್ಟಿಯಿಂದ

ನೋಡು, (ನನ್ನ ಅಭಿಪ್ರಾಯವು) ಇಷ್ಟೆಂದು ಅರಿಕೆಮಾಡಿಕೊಳ್ಳುತ್ತೇನೆ. ಉತ್ತಮನಾದ ಪರಮಾತ್ಮನನ್ನು ಸ್ತೋತ್ರ ಮಾಡುತ್ತಿರುವ ವಿವೇಕವುಳ್ಳ ಜನರ ಜತೆಯಲ್ಲಿ ಉಂಟಾಗುವ ಸುಖಗಳನ್ನು ನಮಗೆ ಪರಮ ಕರುಣೆಯುಳ್ಳ ನೀನು ಸದಾ ಅನುಗ್ರಹಿಸುವುದು.

ವಿ. ವಿ:- ಏಕದಂತ:-

ಭಾದ್ರಪದಶುದ್ಧ ಚತುರ್ಥಿಯದಿನ ಗಜಾನನನು ಸಮೃದ್ಧಿಯಾಗಿ ಕಡುಬನ್ನು ಸೇವಿಸಿ ತನ್ನ ವಾಹನವಾದ ಇಲಿಯ ಮೇಲೆ ಕುಳಿತು ಸಂಚರಿಸುವಾಗ ಆಹಾರದ ಭಾರದಿಂದ ಕೆಳಕ್ಕೆ ಉರುಳಿ ಬೀಳಲು ಚಂದ್ರನು ನೋಡಿ ನಕ್ಕನಂತೆ. ಆಗ ಕುಪಿತನಾದ ಗಣಪತಿಯು ತನ್ನ ಹಲ್ಲನ್ನೇ ಕಿತ್ತು ಕೈಲಿ ಹಿಡಿದು (ಚಂದ್ರನನ್ನು ದಂಡಿಸಲು) ಚಂದ್ರನಿಗೆ ಶಾಪವಿತ್ತ ನಂತೆ. ಅಂದಿನಿಂದ ಅವನು ಏಕದಂತನು.

ಇಭೇಂದ್ರಮುಖ :-

ದಕ್ಷನ ಯಜ್ಞದಲ್ಲಿಕುಪಿತನಾದ ವೀರಭದ್ರನು ಯಜ್ಞಧ್ವಂಸ ಮಾಡುವಾಗ ಗಣಪತಿಯ ಶಿರವನ್ನೂ ಕತ್ತರಿಸಿದನಂತೆ ವಿಘ್ನನಿವಾರಕನ ಪುನರುಜ್ಜೀವನಕ್ಕಾಗಿ ದೇವತೆಗಳು ಶಂಭುವನ್ನು ಯಾಚಿಸಲು ಅವನಿತ್ತ ಆಜ್ಞೆಯಂತೆ ಉತ್ತರ ದಿಕ್ಕಿಗೆ ತಲೆ ಹಾಕಿಕೊಂಡು ಸತ್ತುಬಿದ್ದಿದ್ದ ಮದಗಜವೊಂದರತಲೆಯನ್ನು ಕಡಿದು ತಂದು ವಿಘ್ನೇಶ್ವರನ ಮುಂಡಕ್ಕೆ ಜೋಡಿಸಲು ಪ್ರಾಣಸಂಚಾರವಾಗಿ ಎದ್ದವನೇ ಇಭೇಂದ್ರಮುಖನು.

'ಏಕದಂತ'-'ಏಕ ಬಹುರೂಪತ್ವಾನ್ನತ್ವೇಕಃ' ಒಂದೇ ರೂಪನಾಗಿದ್ದರೂ ಭಗವಂತನು ಬಹುರೂಪನಾಗಿರುವನು. ಇಂಥಾ ಏಕರೂಪಿಯೇ ಬಹುರೂಪಿಯಾಗಿ ವಿಶ್ವರೂಪನಲ್ಲಿ 'ದಂತ ದಾಮ್ಯತೀತಿ ದಂತ ಉಪಶಮನವಿಶಿಷ್ಟ ಎಂದರೆ ಏಕನಾಮಕ ಪರಮಾತ್ಮನಲ್ಲಿ ವಿಷಯಾದಿಗಳಿಂದ ರಹಿತನಾಗಿ ಸಮಾಧಾನ ಶಾಂತಮನಸ್ಕನಾದವನು ಗಣಪತಿ. ವಿಶ್ವ ನಾಮಕ ಹರಿಗೆ ಮಧ್ಯದಲ್ಲಿ ಗಜಮುಖವುಂಟು. ಹೀಗೆ ಹರಿಗೆ ಪ್ರತಿಬಿಂಬವಾಗಿ ವಿಶ್ವೋಪಾಸನೆ ಮಾಡುವುದರಿಂದ ಸ್ವರೂಪತಃ ಗಣೇಶನಿಗೆ ಗಜಮುಖವೆಂದು ಶಾಸ್ತ್ರ ಸಮ್ಮತ.

'ನ ಕರ್ಮಣಾ ವರ್ಧತೇ ಇತಿ ನೋಕನಿಯಃ' ಎಂದರೆ ಯಾವಾತನ ಧ್ಯಾನ ಮಾತ್ರದಿಂದ ಸಂಚಿತ ಆಗಾಮಿ ಕರ್ಮಗಳು ವರ್ಧಿಸುವುದಿಲ್ಲವೋ ಅಂತಹ ಮಹಿಮಾನ್ವಿತನಾದ ಹರಿಯನ್ನು.

[ಜ್ಞಾನಿಗಳ ಒಡನಾಟದಿಂದ ದೊರಕುವ ಸುಖ, ಆನಂದ, ತತ್ವಜ್ಞಾನವಿಚಾರ ಸುಖಗಳನ್ನು ಅನುಗ್ರಹಿಸಬೇಕೆಂಬ ಬೇಡಿಕೆ ಇದರಲ್ಲುಂಟು]

**ಕಡುಕರುಣಿ ನೀನೆಂದರಿತು ಹೇ**
**ರೊಡಲ ನಮಿಸುವೆ ನಿನ್ನಡಿಗೆ ಬೆಂ**
**ಬಿಡದೆ ಪಾಲಿಸು ಪರಮ ಕರುಣಾಸಿಂಧು ಎಂದೆಂದೂ ।**
**ನಡು ನಡುವೆ ಬರುತಿಪ್ಪ ವಿಘ್ನವ**
**ತಡೆದು ಭಗವನ್ನಾಮ ಕೀರ್ತನೆ**
**ನುಡಿದು ನುಡಿಸೆನ್ನಿಂದ ಪ್ರತಿದಿವಸದಲಿ ಮರೆಯದಲೆ ॥೧೫॥**

ಸ. ಅ :- ಬಹು ಕರುಣೆಯುಳ್ಳವನು (ಅಂತಃಕರಣ ಪೂರಿತನು) ನೀನು ಎಂದು ತಿಳಿದು ಎಲೈ ದೊಡ್ಡ ಹೊಟ್ಟೆಯ ದೇವನೆ ನಿನ್ನ ಪಾದಗಳಿಗೆ ವಂದಿಸುತ್ತೇನೆ. ಸದಾ ನನ್ನ ಹಿಂದೆಯೇ ಇದ್ದು ಕಾಪಾಡು. ಕರುಣೆಗೆ ಕಡಲಿನಂತಿರುವವನೆ (ದಯಾಸಿಂಧುವೆ) ಯಾವಾಗಲೂ ಆಗಾಗ್ಗೆ ಒದಗುವ ಅಡ್ಡಿಗಳನ್ನು ನೀಗಿ ಭಗವಂತನ ನಾಮಕೀರ್ತನೆಯನ್ನು ನೀನೂ ಮಾಡಿ ಮರೆಯದೆ ನನ್ನಿಂದಲೂ ದಿನಂಪ್ರತಿ ಮಾಡಿಸು.

ವಿ. ವಿ :- ನುಡಿವುದೇ ಹರಿನಾಮ, ನಡೆವುದೇ ಹರಿಯಾತ್ರೆ ಎಂಬ ಭಾವದಿಂದ ಶ್ರೀಹರಿ, ರಾಮ, ಕೃಷ್ಣ, ಗೋವಿಂದ, ಅಚ್ಯುತ ಮೊದಲಾದ ಅನಂತನಾಮಗಳನ್ನು ಅರಿತು ನುಡಿಯ ಬೇಕೆಂದುಕೊಂಡರೂ ಮನಶ್ಚಾಂಚಲ್ಯಾದಿಗಳಿಂದ ಅಡ್ಡಿ ಒದಗುವುದೂ ಸ್ವಾಭಾವಿಕ, ಶ್ರೀ ಜಗನ್ನಾಥದಾಸರು ಸ್ಥಿರಪ್ರಜ್ಞರು. ಆದರೂ ಹೃದಯಾಕಾಶಾಭಿಮಾನಿ ದೇವ ನಾದ ಗಣಪತಿಯನ್ನು ಪ್ರಾರ್ಥಿಸುವುದರ ಅಂತರ್ಯ ಶಿಷ್ಯಾದಿ ಅಲ್ಪಸತ್ವರ ಎಚ್ಚರಿಕೆ ಗಾಗಿ ಎನ್ನಬಹುದು.

---

[ಸೂಚನೆ:- ಗಣಪತಿಯ ಮೇಲಿನ ಎರಡು ಪದ್ಯಗಳು ಹರಿಕಥಾಮೃತಸಾರ (೨೮ ನೆಯ) ಗಣಪತಿ ಸ್ತೋತ್ರ ಸಂಧಿಯ ಎರಡು ಮತ್ತು ಇಪ್ಪತ್ತನೆಯ ಪದ್ಯಗಳು]

——o——

## ಪುರಂದರದಾಸರ ಉಗಾಭೋಗ

**॥ಸತತ ಗಣನಾಥ ಸಿ । ದ್ಧಿಯ ನೀವ ಕಾರ್ಯದಲಿ ।**
**ಮತಿ ಪ್ರೇರಿಸುವಳು ಪಾರ್ವತೀದೇವಿಯು**
**ಮುಕುತಿಪಥಕೆ ಮನವೀವ ಮಹಾ ರುದ್ರದೇವ ।**
**ಭಕುತಿ ದಾಯಕಳು ಭಾರತಿ ದೇವಿಯು ।**
**ಯುಕುತಿ ಶಾಸ್ತ್ರಗಳಲ್ಲಿ – ವನಜ ಸಂಭವನರಸಿ ।**
**ಸತ್ಕರ್ಮಗಳ ನಡೆಸಿ – ಸುಜ್ಞಾನಮತಿಯಿತ್ತು ।**
**ಪರಿಪಾಲಿಸುವ ನಮ್ಮ – ಪವಮಾನನು ।**
**ಚಿತ್ತದಲಿ ಆನಂದ ಸುಖವನೀವಳು ರಮಾ ।**
**ಭಕ್ತಜನರೊಡೆಯ ನಮ್ಮ – ಪುರಂದರ ವಿಠಲನು ।**
**ಸತತ ಇವರೊಳು ನಿಂತು – ಕೃತಿಯ ನಡೆಸುವನು ॥**

ಸ. ಅ :- ಹಿಡಿದ ಕೆಲಸದಲ್ಲಿ ಜಯವನ್ನು ಯಾವಾಗಲೂ ಕೊಡುವನು ಗಣಪತಿಯು. ಪಾರ್ವತೀದೇವಿಯು ಬುದ್ಧಿ ಪ್ರೇರಕಳು. ಮಹನೀಯರಾದ ರುದ್ರದೇವರು ಮುಕ್ತಿ ಮಾರ್ಗಕ್ಕೆ ಮನಸ್ಸನ್ನು ಕೊಡುವರು. ಭಾರತೀದೇವಿಯು ಭಕ್ತಿಯನ್ನು ಕೊಡುವವಳು. ಬ್ರಹ್ಮನ ಹೆಂಡತಿಯು (ಸರಸ್ವತಿಯು)

ಸತ್ತರ್ಕಶಾಸ್ತ್ರ ಜ್ಞಾನವನ್ನು ಕರುಣಿಸುವಳು. ಮೋಕ್ಷಸಾಧನೆಗೆ ಅವಶ್ಯಕ ಗಳಾದ ಒಳ್ಳೆಯ ಕರ್ಮಗಳನ್ನು ಮಾಡಿಸಿ, ಒಳ್ಳೆಯ ಜ್ಞಾನಪೂರ್ಣ ಬುದ್ಧಿ ಕೊಟ್ಟು ವಾಯುದೇವನು ನಮ್ಮನ್ನು ಕಾಪಾಡುವನು. ಚಿತ್ತದಲ್ಲಿ ಆನಂದಸುಖವನ್ನು ಕೊಡತಕ್ಕವಳು ರಮಾದೇವಿಯು. ಭಕ್ತಜನರ ಪ್ರಭು ವಾದ ನಮ್ಮ ಪುರಂದರವಿಠಲಸ್ವಾಮಿಯು ಯಾವಾಗಲೂ ಇವರೆಲ್ಲರಹೃದಯ ಸ್ಥನಾಗಿ ಕಾರ್ಯಗಳನ್ನು ಮಾಡಿಸುತ್ತಿದ್ದಾನೆ.

ವಿ. ವಿ :- ಈ ಉಗಾಭೋಗದಲ್ಲಿ ತಾರತಮ್ಯಾನುಸಾರ ಆರೋಹಣ ಕ್ರಮದಲ್ಲಿ ಆಯಾ ಅಭಿಮಾನಿ ದೇವತೆಗಳು ಭಗವಂತನ ಪ್ರೇರಣೆಯಂತೆ ಕೈಗೊಳ್ಳುವ (ಜೀವಿಗಳ ಉದ್ಧಾರಕ್ಕಾಗಿ) ಕಾರ್ಯಗಳನ್ನು ಪುರಂದರದಾಸರು ಹೇಳಿದ್ದಾರೆ. ಮುಕುತಿ (ಮುಕ್ತಿ) ಮೋಕ್ಷ, ಯಕುತಿ (ಯುಕ್ತಿ) ಶಾಸ್ತ್ರ-ಸಮಯೋಚಿತ ವಿವೇಚನೆಯಿಂದ ವೇದಕ್ಕೆ ವಿರುದ್ಧವಲ್ಲದ ಪರಮಾರ್ಥ ಜ್ಞಾನವನ್ನು ತಿಳಿಸುವ ಶಾಸ್ತ್ರ. ಬ್ರಹ್ಮತರ್ಕ ವೇದಾವಿರುದ್ಧ ಅನುಮಾನ ಶಾಸ್ತ್ರ, ಸತ್ತರ್ಕವಿದ್ಯೆ.

**ಶ್ರೀ ವಿದ್ಯಾಧೀಶ ತೀರ್ಥ ಗುರುಭ್ಯೋನಮಃ ।**

**ಶ್ರೀ ಲಕ್ಷ್ಮೀವಲ್ಲಭ ತೀರ್ಥ ಗುರುಭ್ಯೋನಮಃ ।**

**ಶ್ರೀ ವಿದ್ಯಾನಿಧಿ ತೀರ್ಥ ಗುರುಭ್ಯೋನಮಃ ।**

**ಶ್ರೀ ಸುಧೀಂದ್ರ ಗುರುಭ್ಯೋನಮಃ ।**

**ಶ್ರೀ ವಿಶ್ವತೀರ್ಥ ಗುರುಭ್ಯೋನಮಃ ।**

**ಶ್ರೀ ವಿದ್ಯಾಪೂರ್ಣ ತೀರ್ಥ ಗುರುಭ್ಯೋನಮಃ ।**

**ಶ್ರೀ ಪುರಂದರಾರ್ಯ ಗುರುಭ್ಯೋನಮಃ ।**

**ಶ್ರೀ ವಿಜಯರಾಯ ಗುರುಭ್ಯೋನಮಃ ।**

**ಶ್ರೀ ಗೋಪಾಲರಾಯ ಗುರುಭ್ಯೋನಮಃ ।**

**ಶ್ರೀ ಜಗನ್ನಾಥರಾಯ ಗುರುಭ್ಯೋನಮಃ ।**

**ಶ್ರೀ ಪ್ರಾಣೇಶ ವಿಠಲಗುರುಭ್ಯೋನಮಃ ।**

**ಶ್ರೀ ಅಶೇಷಪೂರ್ವಾಚಾರ್ಯೇಭ್ಯೋನಮಃ ।**

**ಜ್ಯೇಷ್ಠ ಪಿತೃಭ್ಯೋನಮಃ । ಮಾತಾಪಿತೃಭ್ಯೋನಮಃ ।**

[ಭಜನೆಗೆ ಮುನ್ನ ಹೀಗೆ ಗುರು ಪರಂಪರೆ, ಭಾಗವತ ಪರಂಪರೆ, ಪಿತೃಗಳು, ತಾಯಿ ತಂದೆಗಳು ಎಲ್ಲರನ್ನೂ ವಂದಿಸುವುದು ಶಿಷ್ಟಾಚಾರ.]

॥ ಶ್ರೀ ಗುರ್ವಂತರ್ಗತ ಮಧ್ವೇಶಾರ್ಪಣ ಮಸ್ತು ॥

# ದಾಸಕೂಟದ ಮಹಾತ್ಮೆಯ ದೇವರನಾಮ

೧ ರಾಗ-ಕಲ್ಯಾಣಿ ತಾಳ–ಮಿ-ಛಾ

ಪಲ್ಲವಿ:– ಸಾಟಿಯುಂಟೆ ಶ್ರೀನಿವಾಸನ ದಾಸಕೂಟದ ಮೇಳಕೆ॥

ಅನುಪಲ್ಲವಿ:– ಬೂಟಕದ ಮಾತಲ್ಲ ಕೇಳಿರೊ–ಭಜನೆ ಮಾಡುವ ತಾಳಕೆ ॥

ಚರಣ ೧ :– ವಾಸುದೇವನ ವರ್ಣಿಸಲು ಕಮ-ಲಾಸನಾದಿಸುರೇಂದ್ರರು ।
ದಾಸಜನರ ಸಮೂಹದೊಳಗಾ–ವಾಸವಾಗುತ ನಲಿವರು ।
ಸೂಸುತಿಹ ಗಂಗಾದಿನದಿಗಳು–ಬೇಸರದೆ ಬಂದಿರುವುವು ।
ಕೇಶವನ ಕೊಂಡಾಟ ಧರೆಯೊಳು–ಮೀಸಲಳಿಯದ
ಮಧುರವು ॥೧॥

೨– ಬಾರಿಸುತ ತಂಬೂರಿ ತಾಳವ–ನಾರದರ ಸಂಸ್ಮರಿಸುತ ।
ಭೂರಿಕಿಣಿಕಿಣಿ ಮದ್ದಳೆಯಜಂ–ಭಾರಿಸ್ವರದಿಂ ದರುಹುತ॥೨॥
ವಾರಿಜಾಕ್ಷನ ಪರಮಮಂಗಳ–ಮೂರುತಿಯ ಮುಂದಿರಿಸುತ।
ಮಾರುತನಮತವರಿತುಬಹುಗಂ-ಭೀರಸ್ವರದಿಂದರುಹುತ॥೨॥

೩– ಹಿಂದೆಗಳಿಸಿದಹಲವು ದುರಿತವು-ಕುಂದುವುದು ನಿಮಿಷಾರ್ಧದಿ।
ಅಂದಿನಂದಿನ ದೋಷದುಷ್ಕೃತ–ವೊಂದು ನಿಲ್ಲದು ಕಡೆಯಲಿ ।
ಇಂದಿರಾಧವ ಶೇಷಭೂಧರ–ಮಂದಿರನು ತಾಹರುಷದಿ ।
ಮುಂದೆ ನಲಿಯುತೆ ಮನಕೆ ಪೂರ್ಣಾ ನಂದವೀವನು
ನಗುತಲಿ ॥೩॥

ಸ. ಅ :- ಶ್ರೀನಿವಾಸದೇವರ ಭಕ್ತರ ಗೋಷ್ಠಿ (ಸಮೂಹ) ಗಾನಕ್ಕೆ ಸಮನಾದುದು ಉಂಟೆ ? ಇದು ವಂಚನೆಯ ಮಾತಲ್ಲ, ಕೇಳಿ ಲಯಬದ್ಧವಾಗಿ ಹರಿಭಜನೆ ಮಾಡೋಣ ।

೧. ವಾಸುದೇವನನ್ನು ವರ್ಣಿಸುತ್ತಿರಲು ಬ್ರಹ್ಮನೇ ಮೊದಲಾದ ದೇವೋತ್ತಮರುಗಳು ಹರಿದಾಸರ ಗುಂಪಿನಲ್ಲಿ (ಅದೃಶ್ಯರಾಗಿ) ಇದ್ದುಕೊಂಡು ಸಂತೋಷಗೊಳ್ಳುವರು ಉಕ್ಕಿಹರಿವ ಗಂಗಾದಿ ನದಿಗಳು ಅತ್ಯಂತ ಶ್ರದ್ಧೆವಹಿಸಿ ಅಲ್ಲಿ ನೆಲೆಸಿರುತ್ತವೆ. ಕೇಶವದೇವರ ಸ್ತೋತ್ರ ಮಾಡುವಿಕೆಯು ಅಪರಿಶುದ್ಧವಾಗದ (ಪರಿಶುದ್ಧವಾದ) ಹಿತಕರ ವೃತ್ತಿಯು ॥೧॥

೨. ತಂಬೂರಿ ಮೀಟಿಕೊಂಡು ತಾಳ ತಟ್ಟಿಕೊಂಡು ನಾರದ ಋಷಿಗಳನ್ನು ನೆನೆಸಿಕೊಳ್ಳುತ್ತ ವಿಶೇಷವಾಗಿ ಕಿಣಿಕಿಣಿ ಝಂಕಾರದಿಂದ ಮೃದಂಗದನಾದವನ್ನು ಪ್ರಕಟಿಸುತ್ತ ಕಮಲನೇತ್ರನಾದ ಸ್ವಾಮಿಯ ಮಂಗಳ ಮೂರ್ತಿಯನ್ನು

ಇದಿರಿಗೆ ಪ್ರತಿಷ್ಠಿಸಿಕೊಂಡು ವಾಯ್ವಂಶ ಸಂಭೂತರಾದ ಶ್ರೀ ಮಧ್ವಾ ಚಾರ್ಯರು ತೋರಿರುವ ಮಾರ್ಗದಲ್ಲಿ ಉಚ್ಚಧ್ವನಿಯಲ್ಲಿ ಪ್ರಚಾರಮಾಡುತ್ತ ಭಜಿಸಬೇಕು ||೨||

೩. ಜನ್ಮಾಂತರಗಳಲ್ಲಿ ಸಂಗ್ರಹವಾದ ಹಲವು ಪಾಪಗಳು ನಿಮಿಷಾರ್ಧದಲ್ಲಿ ಇಲ್ಲ ದಂತಾಗುವುವು. ಅಂದಂದಿನ (ಜ್ಞಾತಾಜ್ಞಾತ) ಅಕೃತ್ಯಗಳ ದೋಷವು ಸಂಪೂರ್ಣವಾಗಿ ನಶಿಸಿ ಕೊನೆಗೆ ಲಕ್ಷ್ಮೀಪತಿಯೂ ಶೇಷಾಚಲ ನಿವಾ ಸನೂ ಆದ ಶ್ರೀನಿವಾಸನು ಸಂತೋಷದಿಂದ ನಮ್ಮ ಮುಂದೆ ನಗುತ್ತ ನಲಿಯುತ್ತ ಮನಸ್ಸಿಗೆ ಪೂರ್ಣಾನಂದವನ್ನು ಕರುಣಿಸುವನು ||೩||

ವಿ. ವಿ:- ವಾಸುದೇವ:-

'ವಸಂತಿ ಭೂತಾನಿ ಅಸ್ಮಿನ್ ಇತಿ ವಾಸುದೇವಃ'–ಸರ್ವಭೂತಗಳೂ ಈತನಲ್ಲಿ ಅಡಕ ವಾಗಿರುವುದರಿಂದ ವಾಸುದೇವನು.

'ವಸಂತಿದೇವಾಃ ಅಸ್ಮಿನ್ ಇತಿವಾಸುದೇವಃ'–ಸರ್ವದೇವತೆಗಳೂ ಈತನಲ್ಲಿ ಅವಾಸ ವಾಗಿರುವುದರಿಂದ ವಾಸುದೇವನು.

'ವಸುದೇವಸ್ಯಾಪತ್ಯಂ ವಾಸುದೇವಃ'–ಕೃಷ್ಣಾವತಾರದಲ್ಲಿ ವಸುದೇವನ ಮಗನಾಗಿ ಜನಿಸಿದುದರಿಂದ ವಾಸುದೇವನು.

ಕೇಶವ :-

'ಅಭಿರೂಪಾಃ ಕೇಶಾ ಯಸ್ಯ ಸಃ ಕೇಶವಃ' ಸುಂದರವಾದ ತಲೆಗೂದಲುಳ್ಳವನು ಯಾರೋ ಅವನು ಕೇಶವನು.

'ಕಶ್ಚ ಅಶ್ಚ-ಈಶಶ್ಚ-ಕೇಶಾಃ । ತೇಯದ್ವಶೇ ವರ್ತಂತೇ ಸಕೇಶವಃ' ಎಂದರೆ ಬ್ರಹ್ಮ, ವಿಷ್ಣು, ರುದ್ರರನ್ನು ಕೇಶಾಃ ಎಂಬ ಸಂಜ್ಞೆಯಿಂದ ಕರೆದು ಸೃಷ್ಟ್ಯಾದಿ ಕರ್ತೃ ಗಳಾದ ಅವರುಗಳು ಯಾರ ಇಚ್ಛೆಯಂತೆ ನಡೆಯುವರೋ ಆ ಮಹಾಮಹಿಮನು ಕೇಶವನು.

'ಕೇಶೀವಧಾತ್ ಕೇಶವಃ' ಕಂಸನ ಅಧೀನದಲ್ಲಿದ್ದ ಕೇಶಿ ಎಂಬ ದಾನವನು ಕುದುರೆಯ ಆಕಾರ ತಾಳಿ ಗೋಕುಲದಲ್ಲಿ ಬೆಳೆಯುತ್ತಿದ್ದ ಬಾಲಕೃಷ್ಣನನ್ನು ಇದಿರಿಸಲು ಕೃಷ್ಣನು ಅವನನ್ನು ಸಂಹರಿಸಿದಾಗ ಕೇಶವನೆಂದು ಕರೆಯಲ್ಪಟ್ಟನು.

[ಭಾವಾರ್ಥ : ಹರಿಭಜನೆ ಮಾಡುವವರು ಶುದ್ಧವಾದ ಜಾಗದಲ್ಲಿ ತಮ್ಮ ಉಪಾಸನಾ ಮೂರ್ತಿಯನ್ನು ಪ್ರತಿಷ್ಠಿಸಿಕೊಂಡು, ಷೋಡಶೋಪಚಾರಗಳನ್ನು ಸಮರ್ಪಿಸಿ, ಭಕ್ತ ಜನರೊಂದಿಗೆ ತಂಬೂರಿ ತಾಳ ಮೃದಂಗಾದಿ ವಾದ್ಯಗಳ ಸುನಾದದೊಂದಿಗೆ ಹಿತವಾಗಿ ಉಚ್ಚಕಂಠದಲ್ಲಿ ನಿಸ್ಸಂಕೋಚರಾಗಿ ಭಗವಂತನ ಅನಂತಗುಣಗಳನ್ನು ಸ್ಥಿರಭಾವದಿಂದ ಹಾಡುವುದರಿಂದ ಹರಿಯ ಅನುಗ್ರಹವು ಪ್ರಾಪ್ತವಾಗುವುದು]

# ಭಾರತೀ ದೇವಿಯ ಸ್ತೋತ್ರ

ರಾಗ-ಸುರಟಿ ತಾಳ-ಆದಿ

ಪಲ್ಲವಿ :-ಭಾರತಿ ಭಕುತಿಯನು ಕೊಡುವುದು-ಮಾರುತಸತಿ ನೀನು ||

ಅ.ಪಲ್ಲ :-ಮೂರುಲೋಕದೊಳಗಾರು ನಿನಗೆ ಸರಿ ಮಾರಾರಿಗಳಿಂದಾರಾಧಿತಳೆ ||

ಚ. ೧-ಸುಂದರಿ ಶುಭಕಾರಿ ಸುಮನಸ-ವೃಂದಶೋಭಿತಕಬರಿ ||
ಮಂದಹಾಸಮುಖದಿಂದ ನೋಡಿ ನಿನ್ನ-ಕಂದನೆಂದು ಕರಿ
ಮುಂದಕೆನ್ನನು ||೧||

೨- ವಾಣಿ ಎನ್ನವದನದಲ್ಲಿಡು-ಮಾಣದೆ ಹರಿಸ್ತವನ |
ವೀಣಾಧೃತಸುಜ್ಞಾನಿಯೆ ಪಂಕಜ-ಪಾಣಿಯೆ
ಕೋಕಿಲವಾಣಿಯೆ ಎನಗೆ ||೨||

೩- ಮಂಗಳಾಂಗಿ ಎನ್ನ ಅಂತರಂಗದಲ್ಲಿರು ಮುನ್ನ-
ತುಂಗವಿಕ್ರಮ ತಂದೆ ಗೋಪಾಲ ವಿಠಲನ-ಹಿಂಗದೆ ನೆನೆವ
ಸುಖಂಗಳಕೊಡುವಳೆ ||೩||

ಪ. ಅ :- ಮುಖ್ಯಪ್ರಾಣನ ಸತಿಯಾದ ಭಾರತಿದೇವಿಯೆ ನೀನು ನನಗೆ ಭಕ್ತಿಯನ್ನು ಕರುಣಿಸುವುದು. ಮನ್ಮಥ ಶತ್ರುವಾದ ರುದ್ರನೇ ಮೊದಲಾದವರಿಂದ ಪೂಜ್ಯಳೆ, ತ್ರಿಲೋಕಗಳಲ್ಲಿ ನಿನಗೆ ಸಮರಾರು. (ಇಲ್ಲವೆಂದು ಭಾವ) ಸುಂದರಿಯೆ, ಕಲ್ಯಾಣವನ್ನು ಉಂಟು ಮಾಡುವವಳೆ, ದೇವತೆಗಳ ಸಮೂಹ ದಿಂದ ಪ್ರಕಾಶಿತವಾದ ಹೆಸರುಳ್ಳವಳೆ, ನಸುನಗೆಯ ಮುಖದಿಂದ ದೃಷ್ಟಿಸಿ ನಿನ್ನ ಮಗುವೆಂದು ಭಾವಿಸಿ ನನ್ನ ಏಳಿಗೆಗೆ ಸಹಕಾರನೀಡು. ವೀಣೆಯನ್ನು ಹಿಡಿದಿರುವ ಸುಜ್ಞಾನಿಯೆ, ಕಮಲಹಸ್ತೆ, ಕೋಗಿಲೆಯ ಧ್ವನಿಯಂತೆ ಇನಿದಾದ ಮಾತುಳ್ಳವಳೆ, ಎಲೌವಾಣಿ ಅವಿಚ್ಛಿನ್ನವಾಗಿ ಹರಿಸ್ತೋತ್ರವು ನನ್ನ ಬಾಯಲ್ಲಿ ಇರುವಂತೆ ಕರುಣಿಸು. ಎಲೌ ಮಂಗಳಾಂಗಿಯೇ ಅಮಿತ ಪರಾಕ್ರಮಿ ಯಾದ ಗೋಪಾಲವಿಠಲನನ್ನು ತಪ್ಪದೆ ಸ್ಮರಿಸುವ ಸುಖವನ್ನು ಕೊಡುವವಳೆ ನನ್ನ ಅಂತರಂಗದಲ್ಲಿ ಪ್ರಕಾಶಿಸು.

---

ಸೂಚನೆ :-ಈ ದೇವರನಾಮದಲ್ಲಿ ಪಾಠಾಂತರಗಳುಂಟು. ಇನ್ನೂ ಒಂದೆರಡು ಚರಣ ಗಳು ಅಧಿಕವಾಗಿಯೂ ಉಂಟು. ಪ್ರಕೃತ ಅವನ್ನು ಕೈಬಿಡಲಾಗಿದೆ. ವಿಜಯದಾಸರ ಶಿಷ್ಯರು ಶ್ರೀ ಗೋಪಾಲದಾಸರ ಕೊನೆಯ ತಮ್ಮ ಶ್ರೀ ರಂಗಪ್ಪದಾಸರ ರಚನೆ ಇದು.

# ಮಧ್ವರಾಯರ ಮೇಲೆ

ರಾಗ-ಭೈರವಿ ತಾಳ-ಆದಿ

ಪಲ್ಲವಿ :-ಆನಂದತೀರ್ಥರೆಂಬೊ ಅರ್ಥಿಯಪೆಸರುಳ್ಳ ಗುರುಮಧ್ವ
ಮುನಿರಾಯ

ಅ. ಪ :-ಏನೆಂಬೆ ನಾನಿಮ್ಮ ಕರುಣಕ್ಕೆ ಎಣೆಗಾಣೆ-ಗುರುಮಧ್ವ
ಮುನಿರಾಯ

ಚರಣ ೧-ಬೇಸರದೆ ಸರ್ವರಲ್ಲಿ ಶ್ವಾಸಜಪಗಳ ಮಾಡಿ ಗುರುಮಧ್ವ
ಮುನಿರಾಯ

ಶ್ರೀಶಗರ್ಪಿಸುತ ನಿನ್ನದಾಸರನ್ನ ಪಾಲಿಸಿದೆ-ಗುರುಮಧ್ವ
ಮುನಿರಾಯ ||೧|

೨-ಅಂದು ಹನುಮಂತನಾಗಿ ಬಂದು ಸುಗ್ರೀವನಿಗೆ ನೀ ಗುರುಮಧ್ವ
ಮುನಿರಾಯ

ಅಂದವಾದ ಪದವಿತ್ತಾನಂದದಿಂದ ಪಾಲಿಸಿದೆ ಗುರುಮಧ್ವ
ಮುನಿರಾಯ ||೨|

೩-ಕುಂತಿಯ ಕುಮಾರ ನೀನು ಹೊಂತ ಕೌರವರಕೊಂದೆ-
ಗುರುಮಧ್ವ ಮುನಿರಾಯ

ಅಂಥಪುಣ್ಯಗಳ ಶ್ರೀಕಾಂತನಿಗರ್ಪಿಸಿದೆ-ಗುರುಮಧ್ವ
ಮುನಿರಾಯ ||೩|

೪-ಅದ್ವೈತರನ್ನು ವಾದದಿ ಗೆದ್ದು ಭಕುತರಿಗೆ-ಗುರುಮಧ್ವ
ಮುನಿರಾಯ

ಶುದ್ಧ ತಾತ್ಪರ್ಯವಾಕ್ಯ ಪದ್ಧತಿ ತಿಳಿಸಿದ್ಯೋ-ಗುರುಮಧ್ವ
ಮುನಿರಾಯ ||೪|

೫-ಗುರು ಪ್ರಾಣೇಶ ವಿಠಲನೆ-ಪರನೆಂದು ಡಂಗುರವ-ಗುರುಮಧ್ವ
ಮುನಿರಾಯ

ಸಾರಿ ಸಜ್ಜನರಿಗೆ ಹರಿಯ ಲೋಕ ತೋರಿಸಿದ್ಯೋ-ಗುರುಮಧ್ವ
ಮುನಿರಾಯ ||೫|

ಸ. ಅ :- ಆನಂದತೀರ್ಥರೆಂಬ ತಕ್ಕುದಾದ (ಯೋಗ್ಯವಾದ) ಹೆಸರಿನ ಗುರುಮಧ್ವ ಮುನಿಗಳೇ ನಿಮ್ಮ ಕೃಪೆಗೆ ಸಮನೇ ಇಲ್ಲ. ಅದನ್ನು ಎಷ್ಟೆಂದು ಹೇಳಲಿ. ಸ್ವಲ್ಪವೂ ಉದಾಸರಾಗದೆ ಸರ್ವರಲ್ಲೂ ಶ್ವಾಸ ಜಪಗಳನ್ನು (ಷಡಕ್ಷರಯುತ ಹಂಸಮಂತ್ರ ಜಪವನ್ನು ಮಾಡಿ.) ಲಕ್ಷ್ಮೀಪತಿಯಾದ ನಾರಾಯಣನಿಗೆ

ಅರ್ಪಿಸುತ್ತ ನಿಮ್ಮ ಭಕ್ತರನ್ನು ಪೊರೆದಿರಿ.

ತ್ರೇತೆಯಲ್ಲಿ ಹನುಮಂತನಾಗಿ ಅವತರಿಸಿ ಸುಗ್ರೀವನಿಗೆ ಕಿಷ್ಕಿಂಧೆಯ ರಾಜ್ಯಾಧಿಪತ್ಯವನ್ನು ಕೊಟ್ಟು( ಕೊಡಿಸಿ) ರಕ್ಷಿಸಿದಿರಿ. (ಶ್ರೀರಾಮನಿಂದ ವಾಲಿಯನ್ನು ಕೊಲ್ಲಿಸಿ ಸುಗ್ರೀವನಿಗೆ ಪಟ್ಟಕಟ್ಟಿಸಿದಿರಿ.) ದ್ವಾಪರದಲ್ಲಿ ಕುಂತೀದೇವಿಗೆ ಮಗನಾಗಿ ಜನಿಸಿ ಮೋಸಗಾರರಾದ ದುರ್ಯೋಧನಾದಿ ಕೌರವರನ್ನು ಕೊಂದು ನಿಮ್ಮ ಪುಣ್ಯವನ್ನು ಲಕ್ಷ್ಮೀಪತಿಗೆ ಅರ್ಪಿಸಿದಿರಿ.

ವಾದ ಮಾಡಿದ (ಶಾಸ್ತ್ರವಿಷಯದಲ್ಲಿ ಚರ್ಚೆ ಮಾಡಿದ) ಅದ್ವೈತಿಗಳನ್ನು ಖಂಡಿಸಿ ಶುದ್ಧವಾದ ತಾತ್ಪರ್ಯಾದಿ ಗ್ರಂಥಗಳನ್ನು ರಚಿಸಿ ನಿಮ್ಮ ಹಿಂಬಾಲಕರಾದ ಭಕ್ತರಿಗೆ ಜ್ಞಾನಬೋಧೆ ಮಾಡಿದಿರಿ.

ಲೋಕಕ್ಕೆಲ್ಲ ಒಡೆಯ ಗುರು ಪ್ರಾಣೇಶವಿಠಲಾಂತರ್ಗತ ಸ್ವಾಮಿಯೇ ಶ್ರೇಷ್ಠನೆಂದು ಪ್ರಕಾಶಪಡಿಸಿ ಸುಜನರಿಗೆ ಮೋಕ್ಷಮಾರ್ಗವನ್ನು ತೋರಿಸಿದಿರಿ. ಇಂತಹ ಅನಂತ ಮಹಿಮೆಗಳುಳ್ಳ ಗುರುಮಧ್ವ ಮುನಿಗಳೇ ನಿಮಗೆ ವಂದನೆಗಳು.]

ಟಿ. ವಿ :- ವಾಯುವಿನ ಅಂಶಭೂತರಾದ ಶ್ರೀ ಮಧ್ವಮುನಿಗಳು ಹಿಂದೆ ತ್ರೇತಾ, ದ್ವಾಪರಗಳಲ್ಲಿ ಜನಿಸಿ ಸಾಧಿಸಿದ ಕೃತ್ಯಗಳನ್ನೂ ಈ ಕಲಿಯುಗದಲ್ಲಿ ಮಧ್ವಮತಸ್ಥಾಪಕರಾಗಿ ಮಾಡಿದ ಕೃತ್ಯಗಳನ್ನೂ ಈ ನಾಮದಲ್ಲಿ ಗುರುಪ್ರಾಣೇಶ ವಿಠಲಾಂಕಿತದಿಂದ ಶ್ರೀ ಪ್ರಾಣೇಶ ವಿಠಲರ ಮಕ್ಕಳೂ ಶಿಷ್ಯರೂ ಆದ ವೆಂಕಟ ದಾಸಪ್ಪನವರು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಗುರು ಪ್ರಾಣೇಶ ವಿಠಲನೆ ಪರನೆಂದು= ಜಗದ್ಗುರುಗಳಿಂದ ಮುಖ್ಯ ಪ್ರಾಣದೇವರಿಗೆ ನಿಯಾಮಕನೂ, ಸುಜನರ ಅಜ್ಞಾನವನ್ನು ನಾಶಮಾಡಿ ಜ್ಞಾನವನ್ನು ಕೊಡುವವನೂ ಆದುದರಿಂದ (ವಿದ್ಯಾದಾನೇನ ಠಾ ಶೂನ್ಯಾನ್‌ಲಾತಿ ಗೃಹ್ಣಾತೀತಿ) ವಿಠ್ಠಲಃ ಇವನೇ ಸರ್ವೋತ್ತಮನೆಂದು ಅರ್ಥ.

ರಾಗ-ಆನಂದ ಭೈರವಿ ತಾಳ–ಆದಿ

ಪಲ್ಲವಿ:-ಇದಿರ್ಯಾರೊ ಗುರುವೆ ಸಮರ್ಯಾರೊ ||

ಅ. ಪ :-ಮದನಜನಕಪ್ರಿಯ ಗುರುಮಧ್ವರಾಯ ||

೧–ಸನ್ನುತಮಹಿಮ ಪ್ರ-ಸನ್ನವದನನಿನ-ಗನ್ಯಸಲ್ಲವೊನೀ |
ನೆನ್ನರಕ್ಷಿ ಬೇಕೊ |
ನಿನ್ನ ನೋಡಿದವರು ಧನ್ಯರಾಗುವರು- ಎನ್ನ ದಯಾಮೂರ್ತಿ-
ಮನ್ನಿಸಿ ನೋಡೋ ||೧||

೨–ದುರ್ಜನರನ್ನು–ಗರ್ಜನದಿಂದೋಡಿಸಿ–ಸಜ್ಜನರನು–
ರಕ್ಷಿಸಿದಾತನೆ |
ಈಜಗದಲಿ ಮಧ್ವ–ಗೇಹರ ಪತ್ನಿಯ–ಪೂಜ್ಯ ಜಠರದಲ್ಲಿ–
ಜನಿಸಿದ ಧೀರ ||೨||

೩-ವೇದಶಾಸ್ತ್ರಗಳಿಂದ-ಮಾಯ್ಗಳ ಖಂಡಿಸಿ-ಸಾಧಿಸಿ ಹರಿಯೆ ಸ-
ರ್ವೋತ್ತಮನೆಂದು
ಮೋದಭರಿತವಾದ-ದಿವ್ಯಶಾಸ್ತ್ರವ ಮಾಡಿದ-ಮೋದತೀರ್ಥ-
ಪುರಂದರವಿಠಲನದಾಸ ||೩

ಸ. ಅ :- ಮನ್ಮಥನ ತಂದೆಯಾದ ಶ್ರೀ ಹರಿಗೆ ಪ್ರಿಯನಾದ ಶ್ರೀ ಮಧ್ವಗುರು ನಿನಗೆ ಸರಿಸಮಾನರಾದವರು ಯಾರು ಇದ್ದಾರು ? [ಇಲ್ಲವೆಂಬ ಭಾವ] ಪೊಗಳಲ್ಪಟ್ಟ ಮಹಿಮೆಯುಳ್ಳ, ಶಾಂತವಾದ ಮುಖದ, ದಯಾಮೂರ್ತಿಯೆ ನಿನ್ನನ್ನು ನೋಡಿದವರು ಕೃತಕೃತ್ಯರು. ನಾನು ನಿನಗೆ ಹೊರಗಿನವನಲ್ಲ ರಕ್ಷಿಸು. ಮಧ್ಯಗೇಹ ಭಟ್ಟರ ಪತ್ನಿಯ (ಶ್ರೀ ವೇದವತಿಯವರ) ಗರ್ಭದಲ್ಲಿ ಜನಿಸಿದ ಧೀರನೆ ದುರ್ಜನರನ್ನು (ದುರ್ವಾದಿಗಳನ್ನು) ಆರ್ಭಟದಿಂದ (ಸೂಕ್ತ ಶಾಸ್ತ್ರಾಧಾರಗಳಿಂದ) ಪರಾಭವಗೊಳಿಸಿ, ಸತ್ಪುರುಷರಿಗೆ (ಸನ್ಮಾರ್ಗ ವರ್ತಿಗಳಿಗೆ) ಆಶ್ರಯವಿತ್ತು ಪೊರೆದ ಗುರುವೆ ನಿನ್ನ ಸಮರು ಯಾರು ? ಹರಿಯೆ ಸರ್ವೋತ್ತಮನೆಂದು ವೇದಶಾಸ್ತ್ರಾಧಾರಗಳಿಂದ ಸ್ಥಿರೀಕರಿಸಿ ಕುವಾದಿಗಳನ್ನು ಖಂಡಿಸಿ ಸಂತೋಷದಾಯಕವಾದ ಶಾಸ್ತ್ರಗಳನ್ನು ನಿರ್ಮಿಸಿದ ಪುರಂದರವಿಠಲಾಂತರ್ಗತ ಹರಿಯ ದಾಸನೆ ನಿನ್ನ ಸಮರು ಮತ್ತಾರು ?

ವಿ. ವಿ :- ಸ್ವರ್ಗ, ಮರ್ತ್ಯ, ಪಾತಾಳಗಳು ತ್ರಿಜಗಗಳು.

## ಪ್ರಾಣದೇವರ ಸ್ತೋತ್ರ

೫ ರಾಗ-ಕಲ್ಯಾಣಿ ತಾಳ-ಮಿ.ಛಾಪು

ಪಲ್ಲ. -ಅಂಜಿಕಿನ್ನೇತಕಯ್ಯ-ಸಜ್ಜನರಿಗೆ-ಅಂಜಿಕಿನ್ನೇತಕಯ್ಯ ||
ಅ. ಪ -ಸಂಜೀವರಾಯರ-ಸ್ಮರಣೆ ಮಾಡಿದ ಮೇಲೆ ||

ಚ. ೧-ಕನಸಿನಲಿ ಮನಸಿನಲಿ-ಕಳವಳವಾದರೆ !
ಹನುಮನ ನೆನೆದರೆ-ಹಾರಿ ಹೋಗದೆ ಪಾಪ ||೧||
೨-ರೋಮ ರೋಮಕೆ ಕೋಟಿ-ಲಿಂಗವುದುರಿಸಿದ ।
ಭೀಮನನೆನೆದರೆ-ಬಿಟ್ಟು ಹೋಗದೆ ಪಾಪ ||೨||
೩-ಪುರಂದರ ವಿಠಲನ ಪೂಜೆಯ ಮಾಡುವ ।
ಗುರು ಮಧ್ವರಾಯರ-ಸ್ಮರಣೆ ಮಾಡಿದ ಮೇಲೆ ||೩||

ಸ. ಅ :- ಜೀವಾಧಾರವಾದ ದಶಪ್ರಾಣಗಳಿಗೆ ಒಡೆಯನಾದ ಆಂಜನೇಯನನ್ನು ಸ್ಮರಿಸಿದ ಮೇಲೆ ಹೆದರಿಕೆ ಏಕೆ ? ಪ್ರಾಣಭಯವನ್ನು ನಿವಾರಿಸುವವನೇ ಅವನಾದುದರಿಂದ ಭಯವು ಅನಾವಶ್ಯಕ] ಜಾಗ್ರದವಸ್ಥೆಯಲ್ಲಾಗಲಿ, ಸ್ವಪ್ನಾವಸ್ಥೆಯಲ್ಲಾಗಲಿ ಮನಸ್ಸಿಗೆ ತಳಮಳವುಂಟಾದಲ್ಲಿ ಹನುಮಂತನನ್ನು ಸ್ಮರಿಸಿಕೊಂಡರೆ ಆ ಮನೋ ಭ್ರಾಂತಿಯೆಲ್ಲ ನೀಗುತ್ತದಲ್ಲವೆ !

ಪ್ರತಿ ಕೂದಲಿಗೂ ಕೋಟಿಗಟ್ಟಲೆ ಲಿಂಗವನ್ನು ಉದುರಿಸಿದ ಭೀಮಸೇನನನ್ನು ಸ್ಮರಿಸಲು ಪಾಪ ನಿವಾರಣೆಯಾಗದೆ ?

ಪುರಂದರವಿಠಲಸ್ವಾಮಿಯನ್ನು ಪೂಜಿಸುವ ಗುರುಗಳಾದ ಮಧ್ವರಾಯರನ್ನು ನೆನಸಿಕೊಂಡಲ್ಲಿ ಆ ಮಾನವನಿಗೆ ಹೆದರಿಕೆ ಎಲ್ಲಿ ಬಂದೀತು ?

[ಭಯ ಭ್ರಾಂತನಾದ ಮಾನವನಿಗೆ ಭಯ ಉಂಟಾದಾಗ ಭಕ್ತಿಯಿಂದ ಆಂಜನೇಯ, ಭೀಮ ಮತ್ತು ಮಧ್ವ–ಇವರನ್ನು ಸ್ಮರಿಸಿದಲ್ಲಿ ಅವನ ಹೆದರಿಕೆಯು ನಿವಾರಣೆಯಾಗುವುದು ಎಂಬ ಭಾವ.

ಮನೆಯಲ್ಲಿ ಮಕ್ಕಳು ಹೆದರಿದ್ದಲ್ಲಿ ಆಂಜನೇಯನ ಗುಡಿಗೆ ಕರೆದುಕೊಂಡು ಹೋಗಿ ತೀರ್ಥಪ್ರಸಾದ ಕೊಡಿಸಿ ಯಂತ್ರಕಟ್ಟಿಸುವುದು ಪ್ರತಿಗೃಹಸ್ಥನ ಅನುಭವದಲ್ಲೂ ಸಾಮಾನ್ಯವಾಗಿ ಇದ್ದೇ ಇದೆಯಷ್ಟೆ ? ]

ವಿ. ವಿ :- 'ಸಮ್ಯಕ್ ಜೀವಯಂತೀತಿ ಸಂಜೀವಾಃ'; ಪ್ರಾಣೋಽಪಾನಾದಿದಶ ಪ್ರಾಣಾಃ ತೇಷಾಂ ರಾಟ್ (ಸ್ವಾಮೀ)-

ಚೆನ್ನಾಗಿ ಬದುಕಿಸುವುದಕ್ಕೆ ಕಾರಣನೂ, ದಶ ಪ್ರಾಣಗಳಿಗೆ ಅಧಿಪನೂ ಆಗಿರುವುದರಿಂದ ಸಂಜೀವರಾಯನು. ಪ್ರತಿ ಜೀವಿಯ ಬದುಕು ಮತ್ತು ಸಾವು ನಿರ್ಧಾರವಾಗುವುದು ಆದರ ಉಸಿರಾಟದ ಕ್ರಿಯೆಯಿಂದ. ಜೀವಿಗಳಲ್ಲಿ ಈ ಕ್ರಿಯೆಯನ್ನು ನಡೆಸುವವನೆ ಮುಖ್ಯಪ್ರಾಣನು. ದಶಪ್ರಾಣಗಳಲ್ಲಿ ಪ್ರಧಾನವಾದ ಪ್ರಾಣವಾಯುವು ಹೃದಯದಲ್ಲೂ, ಅಪಾನವಾಯುವು ಗುದಸ್ಥಾನದಲ್ಲೂ, ಸಮಾನ ವಾಯುವು ನಾಭಿಯಲ್ಲೂ, ಉದಾನ ವಾಯುವು ಕಂಠದಲ್ಲೂ, ವ್ಯಾನವಾಯುವು ಶರೀರದ ಸಕಲ ಭಾಗಗಳಲ್ಲೂ ವ್ಯಾಪಿಸಿರಲು ಇವೈದೂ ಪ್ರಾಣವಾಯುಗಳೆನ್ನಲ್ಪಟ್ಟವೆ. ಉಪವಾಯುಗಳೆನಿಸಿಕೊಂಡಿರುವ ಉಳಿದ ಐದರಲ್ಲಿ ನಾಗವೆಂಬುದು ವಾಗಿಂದ್ರಿಯದಲ್ಲೂ, ಕೂರ್ಮವೆಂಬುದು ಉನ್ಮೀಲನ ಶಕ್ತಿಯನ್ನುಂಟು ಮಾಡುವುದರಲ್ಲೂ, ಕೃಕರವೆಂಬುದು ಹಸಿವೆಯನ್ನೂ, ದೇವದತ್ತವೆಂಬುದು ಆಕಳಿಕೆ, ಬಿಕ್ಕಳಿಕೆಗಳನ್ನೂ ಉಂಟು ಮಾಡುವುದರಲ್ಲೂ ತೊಡಗಿರುತ್ತವೆ. ಧನಂಜಯವೆಂಬ ಉಪವಾಯುವು ದೇಹಾದ್ಯಂತ ವ್ಯಾಪಿಸಿಕೊಂಡಿದ್ದು ಪ್ರಾಣೋತ್ಕ್ರಮಣವಾದ ಮೇಲೂ ಸ್ವಲ್ಪ ವೇಳೆ ದೇಹದಲ್ಲಿರುತ್ತದೆ. ಈ ದಶಪ್ರಾಣ ಕ್ರಿಯೆಗಳ ಚಾಲಕನು ಮುಖ್ಯ ಪ್ರಾಣನು.

ಸಂಜೀವನವೆಂಬುದು ಮತ್ತೆ ಪ್ರಾಣವನ್ನು ಕೊಡಬಲ್ಲ ವಸ್ತು (ಮೂಲಿಕೆ). ಲಂಕೆಯಲ್ಲಿ ರಾವಣನೊಂದಿಗೆ ಯುದ್ಧಕ್ಕೆ ನಿಂತು ಗತಪ್ರಜ್ಞನಾದ ಲಕ್ಷ್ಮಣನನ್ನು ಚೇತನಗೊಳಿಸಲು ಆಂಜನೇಯನು ಸಂಜೀವನ ಮೂಲಿಕೆ ಇರುವ ಪರ್ವತಖಂಡವನ್ನೇ ಎತ್ತಿಕೊಂಡು ಬಂದು ಸಮಯಕ್ಕೊದಗಿ ಗತಾಸುಗಳಾಗಿದ್ದ ವಾನರ ಸೈನಿಕರು ಹಾಗೂ ಲಕ್ಷ್ಮಣ ಇವರೆಲ್ಲ ಚೇತರಿಸಿಕೊಂಡು ಮತ್ತೆ ಯುದ್ಧಕ್ಕೆ ಸಿದ್ಧರಾಗುವಂತೆ ಮಾಡಿಯೂ ಸಂಜೀವರಾಯನಾಗಿದ್ದಾನೆ.

ರೋಮ ರೋಮಕೆ ಕೋಟಿಲಿಂಗ ಉದುರಿಸಿದ :-

ಈ ಉಪಾಖ್ಯಾನ ಭಾಗವು ಮಹಾಭಾರತದಲ್ಲಿಲ್ಲ.

ಪುರಂದರದಾಸರು ಪ್ರಯೋಗಿಸಿದ್ದಾರೆ ಕುಮಾರವ್ಯಾಸನ ಕನ್ನಡ ಭಾರತದಲ್ಲಿ ಇದಕ್ಕೆ ಸಂಬಂಧಿಸಿದ ವಿವರಣೆ ಸ್ವಲ್ಪ ಉಂಟು.

ಧರ್ಮರಾಯನು ರಾಜಸೂಯ ಯಾಗ ಮಾಡಲು ಸಿದ್ಧನಾದಾಗ ಯಾಗಶಾಲೆಯಲ್ಲಿ ಉಂಟಾಗುವ (ಭೋಜನಾದಿಗಳಿಂದ ಉಂಟಾಗುವ) ಎಂಜಲಿನ ಶುದ್ಧಿಗೆ ಪುರುಷಾಮೃಗವನ್ನು ಕರೆಸುವಂತೆ ಶ್ರೀಕೃಷ್ಣನು ಸಲಹೆ ಮಾಡಿದನು. ಭೀಮಸೇನನು ಅಣ್ಣನ ಅಜ್ಞೆಯಂತೆಮೃಗವನ್ನು ಹುಡುಕಿಕೊಂಡು ಹೊರಟನು. ಮಾರ್ಗದಲ್ಲಿ ಆಂಜನೇಯನನ್ನು ಸಂಧಿಸಿ ಪರಸ್ಪರ ಪರಿಚಯ ಮಾಡಿಕೊಂಡು ತನಗೆ ಒದಗಬಹುದಾದ ಆಪತ್ತಿನ ನಿವಾರಣೆಗಾಗಿ ಆಂಜನೇಯನು ಅನುಗ್ರಹಿಸಿದ ಆತನ ಮೈಯ ಹೇವು ರೋಮಗಳೊಂದಿಗೆ ಪ್ರಯಾಣವನ್ನು ಮುಂದುವರಿಸಿದನು. ಮೇರು ಪರ್ವತದ ತಪ್ಪಲಿನ ಗುಹೆಯೊಂದರಲ್ಲಿದ್ದ ಪುರುಷಾಮೃಗವನ್ನು ಭೀಮನು ಕಂಡನು. ಕತ್ತಿನಿಂದ ಮೇಲಕ್ಕೆ ಜಿಂಕೆಯ, ಕೆಳಕ್ಕೆ ಮನಷ್ಯನ ಆಕಾರದ, ಮನೋವೇಗದ ಗತಿಯುಳ್ಳ ಆ ಮೃಗವು ಪರಮ ಶಿವಭಕ್ತಿಯುಳ್ಳುದು. ತನ್ನ ನಡೆಯನ್ನು ಅನುಸರಿಸದಿದ್ದರೆ ಪ್ರಾಣಕ್ಕೆ ಅಪಾಯ ಒದಗುವುದೆಂದು ಎಚ್ಚರಿಸಿ ಆ ಮೃಗವು ಭೀಮನನ್ನು ಹಿಂಬಾಲಿಸಿತು. ವಾಯುವೇಗದ ಭೀಮನು ಆ ಮೃಗದ ವೇಗವನ್ನು ಅನುಸರಿಸಲಾರದೆ ಆಂಜನೇಯನು ಕೊಟ್ಟಿದ್ದ ಕೂದಲೊಂದನ್ನು ಎತ್ತಿ ಹಾಕಲು ಅಲ್ಲಿ ಅನೇಕ ಲಿಂಗಗಳು ಉದ್ಭವವಾದವು. ಆ ಪುರುಷಾಮೃಗವು ಆ ಲಿಂಗಗಳನ್ನೆಲ್ಲ ಪೂಜಿಸಿ ಮುಂದಕ್ಕೆ ಹೊರಡುವಷ್ಟರಲ್ಲಿ ಭೀಮನು ಎಷ್ಟೋದೂರ ಕ್ರಮಿಸಿದ್ದರೂ ಆ ಮೃಗವು ಸಮೀಪಕ್ಕೇ ಬಂದುದರಿಂದ ಮತ್ತೆ ಒಂದು ಕೂದಲನ್ನು ಎತ್ತಿ ಹಾಕಿ ಲಿಂಗವನ್ನು ಸೃಷ್ಟಿಸಿ ಕೊನೆಗೆ ಯಾಗಶಾಲೆಗೆ ಮೃಗವನ್ನು ಕರೆತಂದು ಅಲ್ಲಿದ್ದ ಸ್ವರ್ಣಕಂಬಕ್ಕೆ ಬಿಗಿದನು.

ಶ್ರೀಕೃಷ್ಣನು ಆ ಮೃಗದ ಆರಾಧನೆಗಾಗಿ ಅದನ್ನು ಬಂಧಿಸಿದ್ದ ಸ್ತಂಭದಲ್ಲಿ ಹರನು ಆವಿರ್ಭಾವವಾಗುವಂತೆ ಏರ್ಪಡಿಸಲು ಯಾಗವು ಸಾಂಗವಾಗಿ ನೆರವೇರಿತು.

[..... ಕಟ್ಟಿರ್ದ ಕಂಬದಿ ಹರನ । ಹರಿ ನಿರ್ಮಿಸಲು ಹರನತಿ । ಭರದಿ ಪಾವನಮೂರ್ತಿ ಬಿಜಯಂಗೈದ ನೊಲವಿನಲಿ ॥ಕುಮಾರವ್ಯಾಸನ ಭಾರತ ಹಳೆಯ ಪ್ರತಿ,

[ಸಭಾಪರ್ವ, ಸಂಧಿ ೭, ಶ್ಲೋಕ ೪೬]

(ಹಾಡಿನಲ್ಲಿಭೀಮಸೇನನು ರೋಮದಲ್ಲಿ ಕೋಟಿಗಟ್ಟಲೆ ಲಿಂಗಳನ್ನು ಉದುರಿಸಿದನೆಂದು ಇದ್ದರೂ ಹನುಮಂತನಿಂದ ಅಭಿನ್ನನಾದುದರಿಂದ ಹೀಗೆ ಪ್ರಯೋಗ ಮಾಡಿರಬೇಕು.)

೬ ರಾಗ–ಕಲ್ಯಾಣಿ ತಾಳ–ಮಿ. ಛಾಪು

ಪಲ್ಲವಿ:–ಗೆದ್ದೆಯೊ ಹನುಮಂತ ಅಸುರರ–ಒದ್ದೆಯೋ ನೀ ಬಲವಂತ ||

ಅ. ಪ :-ಬದ್ಧಾಂಜಲಿಯಿಂದ ರಘುಪತಿ ಪಾದವ-ಹೃದ್ಯದಿ ಭಜನೆ ಮಾಡುತ
ನಿಂತ ಬುದ್ಧಿವಂತ ||

ಚ. ೧ :-ಅಂಜನೆ ಸುತನೀತ-ಲಂಕಾದಿಪುರದಿ-ಅಕ್ಷಯನ ಕೊಂದಾತ ।
ಕಂಜಾಕ್ಷಿ ಸೀತೆಯ ಕಂಡು ಮುದ್ರಿಕೆಯಿತ್ತು-ಮಂಜುಳವಾರ್ತೆಯ-
ತಂದ ರಾಮಧೂತ ||೧||

೨-ಈರೇಳು ಜಗದೊಳಗೆ-ಇನ್ನು ಮತ್ತೆ-ಯಾರು ಸರಿನಿನಗೆ ।
ವೀರಮಹಾಬಲ ಶೂರಪರಾಕ್ರಮ-ಧೀರ ಸಮೀರ ಉದಾರ
ಗಂಭೀರ ||೨||

೩-ವಾಂಛಿತಫಲವೀವ ವರಮುಖ್ಯ-ಪ್ರಾಣ ಮಹಾನುಭಾವ ।
ಕಿಂಚಿತ್ ಕಷ್ಟಪಡಲೀಸ ಭಕ್ತರ್ಗೆ ಪದ್ಮ-ಲೋಚನ
ಪುರಂದರ ವಿಠಲನದಾಸ ||೩||

ಸ. ಅ :- ರಾಕ್ಷಸರನ್ನು ಒದ್ದ (ಹಿಂಸಿಸಿದ) ಬಲಶಾಲಿಯಾದ ಹನುಮಂತನೆ
ನೀನು ವಿಜಯಿ ||

ಬೊಗಸೆಗಟ್ಟಿನಿಂತು ಶ್ರೀರಾಮನನ್ನು ಅತಿ ಪ್ರೇಮದಿ ಭಜಿಸುವ
ಬುದ್ಧಿಶಾಲಿಯೆ ನೀನು ವಿಜಯಿ ||

ಅಂಜನೆ ಎಂಬುವವಳ ಮಗನೂ, ಲಂಕಾಪುರದಲ್ಲಿ ಅಕ್ಷಯಕುಮಾರನನ್ನು (ಈತ ರಾವಣನ ಮಗ) ಕೊಂದವನೂ, ಕಮಲನೇತ್ರೆಯಾದ ಸೀತೆಗೆ ರಾಮ ಮುದ್ರಿಕೆಯನ್ನು ಕೊಟ್ಟು, ಆಕೆಗೆ ಸಂಬಂಧಿಸಿದ ಹಿತಕರವಾರ್ತೆಯನ್ನು ಶ್ರೀರಾಮನಿಗೆ ತಂದರುಹಿದವನೂ ನೀನೆಯೇ.

ವೀರನೂ, ಮಹಾಬಲಶಾಲಿಯೂ, ಪರಾಕ್ರಮಿಯೂ, ಧೈರ್ಯಶಾಲಿಯೂ, ಉದಾರನೂ. ಗಂಭೀರನೂ ಆದ ಎಲೈ ಮಾರುತಿಯೆ ಹದಿನಾಲ್ಕು ಲೋಕಗಳಲ್ಲಿ ನಿನಗೆ ಸಮಾನರಾರು ? [ಯಾರೂ ಇಲ್ಲವೆಂಬ ಭಾವ] ಕಮಲನೇತ್ರನಾದ ಪುರಂದರವಿಠಲನ ದಾಸನೂ, ಮಹಾನುಭಾವನೂ, ಅರ್ಥಿಗಳ

ಯಾಚನೆಯನ್ನೂ ಸಲ್ಲಿಸುವವನೂ ಆದ ಶ್ರೇಷ್ಠನಾದ ಮುಖ್ಯ ಪ್ರಾಣ ದೇವನೆ ನೀನು ನಿನ್ನ ಭಕ್ತರು ಸ್ವಲ್ಪಕಷ್ಟವನ್ನು ಅನುಭವಿಸಲೂ ಬಿಡೆ. (ಅಂತಹ ಕರುಣಾಮೂರ್ತಿ ನೀನು) ಇಗೋ ವಂದಿಸುವೆನು.

ವಿ. ವಿ :- ಅಞ್ಜನಾ ಪುಂಜಿಕಸ್ಥಲೀ ಎಂಬ ಅಪ್ಸರೆಯು ಶಾಪದಿಂದ ವಾನರಿಯಾಗಿ ಕೇಸರಿ ಎಂಬ ಕಪಿನಾಯಕನನ್ನು ಮದುವೆಯಾಗಿ ಒಮ್ಮೆ ಒಬ್ಬಳೆ ವನವಿಹಾರ ಮಾಡುತ್ತಿದ್ದಾಗ ಈಕೆಯಲ್ಲಿ ಮೋಹಗೊಂಡ ವಾಯುದೇವನ ಅನುಗ್ರಹದಿಂದ ಆಂಜನೇಯನನ್ನು ಹಡೆದಳು [ವಾ. ರಾ. ಕಿಷ್ಕಿಂ. ೬೬]

ಸೀತೆಯ ಶೋಧನೆಗಾಗಿ ಸಮುದ್ರವನ್ನು ಲಂಘಿಸಿ ಲಂಕೆಗೆ ಹೋಗಿದ್ದಾಗ ಇದಿರಿಸಿದ ಅಕ್ಷಯಕುಮಾರನನ್ನು ಆಂಜನೇಯನು ಸಂಹರಿಸಿದನು.

೭ ರಾಗ–ಆರಭಿ ತಾಳ–ಆದಿ

ಪಲ್ಲ-ಸೂತ್ರನಾಮಕ ಸುಂದರನೇಕ-ಸೂತ್ರನಾಮಕ ||

ಅ. ಪ-ಸೂತ್ರನಾಮಕ ಸ | ತ್ಪಾತ್ರ ಗರುಡಶಿಖಿ | ನೇತ್ರ ವಿನುತ ಶುಭ |
ಗಾತ್ರಪವಿತ್ರ ||

ಚರ. ೧-ರಾಮಪದಾಬ್ಜ ಭೃಂಗ-ರಾವಣಮದಭಂಗ–ಕಾಮಗಜ ಸಿಂಗ |
ತಾಮಸಕುಲವನ-ಧೂಮಕೇತು ಬುಧ | ಸೌಮನಸಾಗ್ರಣಿ |
ಕಾಮಿತಫಲದ ||೧||

೨-ಪಾಂಡುನಂದನ ಪಾಲಿಸೊ ಎನ್ನಾ-ಖಂಡಪಾವನ |
ಅಂಡಜಾಧಿಪನ-ಕಂಡು ಭಜಿಸಿದೋ-ರ್ದಂಡ ಖಳಕುಲ-
ಚಂಡ ಪ್ರಚಂಡ ||೨||

೩ -ಜ್ಞಾನದಾಯಕ ಆನಂದತೀರ್ಥ-ದೀನಪೋಷಕ |
ಭಾನುಕೋಟಿ ಶ್ರೀ ವ್ಯಾಸವಿಠ್ಠಲನ-ಧ್ಯಾನದಲಿಡುಮನ್ಮಾನಸ
ಹಂಸ ||೩||

ಸ. ಅ :- ಸೂತ್ರನಾಮಕನೇ (ವಾಯುವೆ), ಅನೇಕ ಗುಣಗಳಿಂದ ಕೂಡಿದ ಸುಂದರನೆ, ಒಳ್ಳೆಯ ಯೋಗ್ಯತೆಯುಳ್ಳವನೆ, ಗರುಡ ರುದ್ರರಿಂದ ವಂದಿತನೆ, ಮಂಗಳಕರವಾದ ದೇಹವುಳ್ಳವನೆ, ಪರಿಶುದ್ಧನಾದ ಸೂತ್ರನಾಮಕನೇ | ರಾಮನ ಪಾದಕಮಲಗಳಲ್ಲಿ ದುಂಬಿಯಂತೆ ಆಶ್ರಯಪಡೆದಿರುವವನೆ, ರಾವಣನ ಅಹಂಕಾರವನ್ನು ಮುರಿದವನೆ ಮನ್ಮಥನೆಂಬ ಆನೆಗೆ ಸಿಂಹ ಪ್ರಾಯನೇ (ಇಂದ್ರಿಯ ನಿಗ್ರಹ ಮಾಡಿರುವವನೆ.) ತಮೋಗುಣವುಳ್ಳವರ ಸಮೂಹವೆಂಬ ಕಾಡಿಗೆ ಅಗ್ನಿಸ್ವರೂಪನೆ, ವಿದ್ವಾಂಸನೆ, ದೇವತೆಗಳ ಮುಂದಾಳೆ, ಇಷ್ಟಾರ್ಥ ದಾತನೆ (ರಕ್ಷಿಸು).

ಗರುಡವಾಹನನಾದ ಶ್ರೀಕೃಷ್ಣನನ್ನು ಕಂಡು ಸ್ತುತಿಸಿದವನೆ, ಅತ್ಯಂತ ಬಾಹುಬಲವುಳ್ಳ ರಾಕ್ಷಸರ ಸಮೂಹಕ್ಕೆ ಭಯಂಕರನಾದವನೆ, ಅಸಾಮಾನ್ಯನೆ, ಅವಿಚ್ಛಿನ್ನವಾದ ಪಾವಿತ್ರ್ಯವುಳ್ಳವನೆ, ಪಾಂಡುರಾಜನ ಮಗನಾದ ಭೀಮಸೇನದೇವನೆ ನನ್ನನ್ನು ಕಾಪಾಡು.

ತಿಳಿವಳಿಕೆಯನ್ನು ಅನುಗ್ರಹಿಸುವವನೆ, ಆನಂದತೀರ್ಥನಾಮಕನೆ, ನಮ್ರರಾದವರ ಉದ್ಧಾರಕನೆ ನನ್ನ ಮನಸ್ಸಿನಲ್ಲಿ ಹಂಸಜಪ ರೂಪದಲ್ಲಿ ವಿಹರಿಸುವ ಸೂತ್ರನಾಮಕನೆ, ಕೋಟಿ ಸೂರ್ಯಪ್ರಕಾಶನಾದ ಶ್ರೀ ವ್ಯಾಸವಿಠಲಾಂತರ್ಗತನಾದ ಸ್ವಾಮಿಯ ಧ್ಯಾನದಲ್ಲಿ ನನ್ನನ್ನು ಇರಿಸು.

## [ಹನುಮ, ಭೀಮ- ಮತ್ತು ಮಧ್ವರ ಸ್ತೋತ್ರವಿದು]

ವಿ. ವಿ :- ಸೂತ್ರನಾಮಕ :- ಸೂತ್ರ=ಸ್ಯೂತಂ ಜಗದಿದಮ್ ಯಸ್ಮಿನ್ ಸೂತ್ರಂ ವಾಯುರಸೌಸ್ಮೃತಃ (ಅಂದರೆ ಮುಖ್ಯ ಪ್ರಾಣನಲ್ಲಿ ಇಡೀ ಜಗತ್ತು ಆಶ್ರಿತವಾಗಿರುವುದರಿಂದ ಆತನು ಸೂತ್ರನೆನಿಸುತ್ತಾನೆ. (ಬೃಹದಾರಣ್ಯಕ ಭಾಷ್ಯ)

ಸೂತ್ರೋವಾಯುಃ-ಸಂಕರ್ಷಣಾತ್ಮಕ ಪರಮಾತ್ಮನಿಗೆ ಜಯಾದೇವಿಯಲ್ಲಿ ಜನಿಸಿದವನೇ ಸೂತ್ರನಾಮಕ ವಾಯುವು.

ಸುಂದರನೇಕ-ದ್ವಾತ್ರಿಂಶಲ್ಲಕ್ಷಣೋಪೇತಃ ಪುರುಷಃ ಸುಂದರಃ ಸ್ಮೃತಃ ।
ಸುಂದರಃ ಕಪಿ ಮುಖ್ಯೇಸ್ಯಾತ್ ।

ಲಕ್ಷಣ ಶಾಸ್ತ್ರದಲ್ಲಿ ಹೇಳಿರುವ ೩೨ ಲಕ್ಷಣಗಳುಳ್ಳ ಪುರುಷನು ಸುಂದರನು. ಕಪಿಮುಖ್ಯನಿಗೆ ಸುಂದರನೆಂಬ ಅಭಿಧಾನವೂ ಉಂಟು. ಈರೀತಿ ಸೂತ್ರನು ಅನೇಕವಾದ ಸುಂದರನಾಗಿದ್ದಾನೆ.

ಶ್ರೀ ಪ್ರಾಣೇಶವಿಠಲದಾಸರು :-

ರಾಗ–ಕಾಂಭೋಜಿ ತಾಳ–ಖಂ. ಛಾ.

ಶ್ರೀ ವಾಯುದೇವರಿಗೆ ನೀತವಾದ । ಮೂವತ್ತೆರಡು ಸುಲಕ್ಷಣಗಳ ವರ್ಣಿಸುವೆ ॥ಪ॥
ಎಂಬ ಪದದಲ್ಲಿ

ನ್ಯಗ್ರೋಧಪರಿಮಂಡಲದಲ್ಲಿ ಹೇಳಿರುವ ದೇಹದ ಅಳತೆಯೊಂದಿಗೆ :-

ತಾಲು (ದವಡೆ) ಜಾನುಗಳು(ಮೊಳಕಾಲು), ಸ್ತನದತುದಿಯು (ಮೊಲೆಯ ತುದಿಭಾಗ) ನಾಸಿಕ (ಮೂಗು), ಚಕ್ಷು (ಕಣ್ಣು) ಈ ಐದೂ ದೀರ್ಘ (ವಿಶಾಲ); ಜಂಘೆ (ಕಿರುದೊಡೆ), ಗ್ರೀವ (ಕುತ್ತಿಗೆ), ಆಲಿಂಗ, ಪೃಷ್ಠ (ಬೆನ್ನು) ಈ ನಾಲ್ಕು ಹ್ರಸ್ವ (ಕಿರಿದು); ಕೇಶ (ಕೂದಲು), ರದ (ಹಲ್ಲು), ಮೇಲಾದ ತ್ವಕ್ (ಹೊದಿಕೆಯಾಗಿರುವ ಚರ್ಮ), ಬೆರಳು, ನಖ (ಉಗುರು), ಈ ಐದೂ ಸೂಕ್ಷ್ಮ (ತೆಳುವು ; ಕಕ್ಷ (ಕಂಕುಳು, ಬಗಲು), ಕುಕ್ಷಿ(ಹೊಟ್ಟೆ), ವಕ್ಷ( ಎದೆ), ಕರ್ಣ( ಕಿವಿ), ನಖ(ಉಗುರು), ಸ್ಕಂಧ (ಹೆಗಲು), ಭುಜಾಗ್ರ ಈ ಆರೂ ಉನ್ನತ (ಎತ್ತರ) ಅಕ್ಷಿ (ಕಣ್ಣು), ಚರಣ (ಪಾದಗಳು), ಕರ (ಕೈ), ನಖ (ಉಗುರು), ಅಧರ (ತುಟಿ), ಜಿಹ್ವೆ (ನಾಲಗೆ), ಅಣುಜಿಹ್ವೆ (ಕಿರು ನಾಲಿಗೆ) -ಈ ಏಳು ಅಂಗಗಳು ರಕ್ತ (ಕೆಂಪು), ಸತ್ವ, ನಾಭಿ

(ಹೊಕ್ಕಳು) ಸ್ವರ (ಧ್ವನಿ) – ಈ ಮೂರೂಗಂಭೀರ:–ಲಲಾಟ (ಹಣೆ), ಉರ (ಎದೆ) ಇವೆರಡುವಿಸ್ತಾರ (ಹರಡಿಕೊಂಡು ವಿಶಾಲವಾಗಿ) ಹೀಗೆ ಒಟ್ಟು ೩೨ ಲಕ್ಷಣಗಳೆಂದು ಹಾಡಿದ್ದಾರೆ. ತಾರತಮ್ಯಾನುಸಾರ ಈ ಗುಣಗಳು ಹೆಚ್ಚು ಕಡಿಮೆ ಆಗುವುವು.

ಶಿಖಿ + ನೇತ್ರ- ಬೆಂಕಿಯ ಕಣ್ಣುಳ್ಳವ (ರುದ್ರ)

ಎನ್ನ, ಅಖಂಡ ಪಾವನ= ಅನುಸ್ಯೂತವಾಗಿ ಪರಿಶುದ್ಧನಾಗಿರುವವ

ಅಂಡಜಾಧಿಪ- (ಅಂಡ–ಜ ಅಧಿಪ) ಮೊಟ್ಟೆಯಲ್ಲಿ ಹುಟ್ಟಿದ ಗರುಡನ ಒಡೆಯ-ಕೃಷ್ಣ ರಾಮಪ್ರಿಯ ಹನುಮಾನ್, ಕೃಷ್ಣೇಷ್ಟಃ ಭೀಮಸೇನಃ' ಎಂಬ ವಚನಾನುಸಾರ ಕೃಷ್ಣರೂಪೀ ಪರಮಾತ್ಮನನ್ನು ಸ್ತುತಿಸಿದವ ಭೀಮಸೇನದೇವರು.

ಶ್ರೀ ವ್ಯಾಸವಿಠಲ:- ಘನ ವಿದ್ವಾಂಸರಾದ ಕಲ್ಲೂರು ಸುಬ್ಬಣ್ಣಾಚಾರ್ಯರೆಂಬ ಸುಧಾ ಪಾಠಕರು ಶ್ರೀ ವಿಜಯದಾಸರ ಮಹಿಮೆಗೆ ತಲೆವಾಗಿ ಅವರಲ್ಲಿ ಶಿಷ್ಯತ್ವವನ್ನು ಸ್ವೀಕರಿಸಿ ವ್ಯಾಸ ವಿಠಲಾಂಕಿತ ಪಡೆದು ರಚಿಸಿರುವ ಗೀತಗಳಲ್ಲಿ ಇದೊಂದು.

೮ ರಾಗ–ಕಾಂಭೋಜಿ [ರುದ್ರದೇವರ ಮೇಲೆ] ತಾಳ–ಖಂ. ಛಾ.

**ಪಲ್ಲವಿ :–ಕೈಲಾಸವಾಸ ಗೌರೀಶ ಈಶ**

**ಅ. ಪ :–ತೈಲಧಾರೆಯಂತೆ ಮನಸು ಕೊಡು ಹರಿಯಲ್ಲಿ ।**

**ಚ. ೧ :–ಅಹೋರಾತ್ರಿಯಲಿ ನಾನು–ಅನುಚರಾಗ್ರಣಿಯಾಗಿ–ಮಹಿಯೊಳಗೆ ಚರಿಸಿದೆನು ಮಹಾದೇವನೆ ।**

**ಅಹಿಭೂಷಣನೆ ಎನ್ನ-ಅವಗುಣಗಳೆಣಿಸದಲೆ–ವಿಹಿತಮಾರ್ಗದಿ ವಿಷ್ಣುಭಕುತಿ ಕೊಡು ಶಂಭೋ ।**

**೨–ಮನಸೆ ಕಾರಣವಲ್ಲ–ಪಾಪಪುಣ್ಯಕ್ಕೆಲ್ಲ–ಅನಲಾಕ್ಷ ನಿನ್ನ ಪ್ರೇ। ರಣೆಯಿಲ್ಲದೆ।**

**ದನುಜಗಜಹಾರಿಯೆ ದಂಡಪ್ರಣಾಮವ ಮಾಳ್ಪೆ–ಮಣಿಸು ಈ ಮನಸು ಸಜ್ಜನರ ಚರಣದಲಿ ॥೨॥**

**೩–ಭಾಗೀರಥೀಧರನೆ ಭಯವ ಪರಿಹರಿಸೊ ಲೇಸಾಗಿ ನೀ ಒಲಿದೆನಗೆ– ಸಂತಸದಿ ದೇವ ।**

**ಭಾಗವತಜನಪ್ರಿಯ–ವಿಜಯವಿಠಲನಂಘ್ರಿ-ಜಾಗುಮಾಡದೆ ಭಜಿಪ- ಭಾಗ್ಯವನು ಕೊಡು ಶಂಭೋ ॥೩॥**

ಸ. ಅ :- ಕೈಲಾಸಪರ್ವತದಲ್ಲಿ ವಾಸಿಸುವವನೂ, ಗೌರೀಪತಿಯೂ ಆದ ಈಶ್ವರನೆ ಎಣ್ಣೆಯ ಧಾರೆಯಂತೆ ಅವಿಚ್ಛಿನ್ನವಾಗಿ (ಸಂತತವಾಗಿ) ಪ್ರವಹಿಸುವಂತೆ ಮನಸ್ಸು ಶ್ರೀಹರಿಯಲ್ಲಿ (ಅಖಂಡವಾಗಿ) ನಿಲ್ಲುವಂತೆ ಅನುಗ್ರಹಿಸು. ಮಹಾ

ದೇವನೆ, ಹಗಲೂ-ರಾತ್ರೆ ನಿನ್ನನ್ನು ಅನುಸರಿಸುವ ಭಕ್ತರುಗಳಲ್ಲಿ ಮುಂದಾ ಳಾಗಿ ಈ ಭೂಮಿಯಲ್ಲೆಲ್ಲ ನಾನು ತಿರುಗಾಡಿದೆ, ಸರ್ಪಭೂಷಣನೆ ನನ್ನ ಅನುಚಿತವರ್ತನೆಗಳನ್ನು ಲೆಕ್ಕಿಸದೆ ಯೋಗ್ಯವಾದ ದಾರಿಯಲ್ಲಿ ವಿಷ್ಣುವನ್ನು ಉಪಾಸಿಸುವ ರೀತಿಯನ್ನು ಕರುಣಿಸು. ಎಲೆ ಅಗ್ನಿನೇತ್ರನೆ, ನೀನು ಪ್ರೇರಿಸದೆ ಪಾಪ-ಪುಣ್ಯ ಕರ್ಮಾಚರಣೆಗೆ ಕೇವಲ ಮನಸ್ಸೆ ಕಾರಣವಾಗದು. ರಾಕ್ಷಸರೆಂಬ ಆನೆಗಳನ್ನು ಸಂಹರಿಸುವದೇವನೆ ದೀರ್ಘದಂಡಪ್ರಣಾಮವನ್ನು ಮಾಡುತ್ತೇನೆ. ಸತ್ಪುರುಷರ ಪಾದಗಳಲ್ಲಿ ನನ್ನ ಮನಸ್ಸನ್ನು ನೆಲೆಗೊಳಿಸು. ಭಾಗೀರಥಿಯನ್ನು ತಲೆಯಲ್ಲಿ ಧರಿಸಿರುವ ದೇವನೆ, ನೀನು ಒಲಿದು ಪ್ರಸನ್ನ ನಾಗಿ ನನಗೆ ಪ್ರಾಪ್ತವಾಗಿರುವ ಹೆದರಿಕೆಯನ್ನು (ವಿಷ್ಣುಭಕ್ತಿಗೆ ಸಂಬಂಧಿಸಿ ದಂತೆ) ಹೋಗಲಾಡಿಸು. ಭಗವದ್ಭಕ್ತರುಗಳಲ್ಲಿ ಪ್ರೀತಿಯುಳ್ಳವನಾದ ಶಂಭುವೆ ವಿಜಯವಿಠ್ಠಲನ ಪಾದಗಳನ್ನು ಅಲಕ್ಷ್ಯ ಮಾಡದೆ ಭಜಿಸುವ ಭಾಗ್ಯವನ್ನು ಕರುಣಿಸು.

ವಿ. ವಿ :- ಮನೋಭಿಮಾನಿಯೂ, ಅಹಂಕಾರ ತತ್ವಾಭಿಮಾನಿಯೂ ಆದವನು ರುದ್ರದೇವನು. ಹರಿಭಕ್ತಿಮಾಡಲು ಮನಸ್ಸನ್ನು ಪ್ರೇರೇಪಿಸುವವನೂ ಆತನೇ. ಆತನ ಅನುಗ್ರಹ ಅವಶ್ಯ. ಕೈಲಾಸ :-ಹಿಮವತ್ಪರ್ವತದ ಶಿಖರಗಳಲ್ಲಿ ಉತ್ತರಭಾಗದಲ್ಲಿರುವ ಒಂದು ಪರ್ವತ ಭಾಗ. ಇದಕ್ಕೆ ರಜತಾದ್ರಿ ಎಂಬ ಹೆಸರೂ ಉಂಟು. ಇದು ಶಿವನ ಆವಾಸಸ್ಥಾನ. ಗೌರೀ :-ಪಾರ್ವತಿಯ ನಾಮಾಂತರ, ಶುಂಭ-ನಿಶುಂಭರೆಂಬ ದೈತ್ಯರ ಉಪಟಲದಿಂದ ತೊಂದರೆಗೊಳಗಾದ ದೇವತೆಗಳು ಪಾರ್ವತೀದೇವಿಯ ಮರೆ ಹೊಗಲು ಆಕೆಯ ದೇಹ ಕೋಶದಿಂದ ಕೌಶಿಕೀ ಎಂಬ ಸ್ತ್ರೀರೂಪವು ಹೊರ ಬಂದು ದೇವತೆಗಳಿಂದಲೆಲ್ಲ ಬಗೆ ಬಗೆಯ ಆಯುಧಗಳನ್ನು ಸಂಗ್ರಹಿಸಿ ಆ ದೈತ್ಯರುಗಳನ್ನು ಸಂಹರಿಸಿದಳು. ಆಗ ಪಾರ್ವತಿಯು ಕಪ್ಪುವರ್ಣದಿಂದ ಕಾಣಲು ಶಂಭುವು ಆಕೆಯನ್ನು ಕಾಳಿ ಎಂದನು. ಆಕೆಯು ತಪಸ್ಸು ಮಾಡಿ ಗೌರವರ್ಣವನ್ನು ಪಡೆದು ಗೌರಿ ಎನ್ನಿಸಿಕೊಂಡಳಂತೆ.

ಇದು ವಿಜಯದಾಸರ ರಚನೆ.

ದಾಸಪ್ಪನೆಂಬುದು ಇವರ ಜನ್ಮನಾಮವು. ವ್ಯಾಸಕಾಶಿಗೆ (ಸ್ವಪ್ನದಲ್ಲಿ) ಪುರಂದರದಾಸರು ಇವರನ್ನು ಕರೆದೊಯ್ದು ವಿಜಯ ವಿಠಲಾಂಕಿತ ಕೊಟ್ಟರಂತೆ. (ಪುರಂದರದಾಸರ ಕೊನೆಯ ಮಗ ಮಧ್ವಪತಿಯ ಪುನರ್ಜನ್ಮವೆ ಇವರದೆಂಬ ನಂಬುಗೆಯುಂಟು,

ರಾಗ–ಮೋಹನ ತಾಳ-ಖಂ. ಛಾ

ಪಲ್ಲವಿ :- ಈತ ಲಿಂಗದೇವ ಶಿವನು–ಆತ ರಂಗಧಾಮ ವಿಷ್ಣು ||

ಅ. ಪ :-ಮಾತನಾಡೋ ಮಂಕು ಮನುಜ-ಮನದ ಅಹಂಕಾರವ ಜರಿದು ||

ಚ. ೧ :-ವೇದಕ್ಕೆ ಸಿಲ್ಕಿದಾತ ನೀತ-ವೇದನಾಲ್ಕು ತಂದನಾತ |

ಬೂದಿಮೈಯಲ್ಲಿ ಧರಿಸಿದ ನೀತ–ಭುವನಗಿರಿಯ ಪೊತ್ತನಾತ ||೧||

೨–ಆದಿದೈತ್ಯರ ಗೆಲಿದನೀತ–ಮಾಧವ ಮಧುಸೂದನಾತ ।
ಮದನನುರುಹಿದ ನೀತ-ಮನ್ಮಥನ್ನ ಪಡೆದನಾತ ॥೨॥

೩–ಗಂಗೆಯು ಪೊತ್ತಾತ ನೀತ–ಗರುಡವಾಹನನೇರಿದನಾತ ।
ತುಂಗ ಹೆಳವನ ಕಟ್ಟೆ–ಲಿಂಗನೀತ–ರಂಗನಾತ ॥೩॥

ಸ. ಅ :- ಲಿಂಗಶರೀರಿಯಾದ ಶಿವನೀತ-ರಂಗಧಾಮನಾಮಕ ವಿಷ್ಣುವಾತ ॥
ಮನಸ್ಸಿನ ಅಹಂಕಾರವನ್ನು ದೂರ ಮಾಡಿ, ದಡ್ಡನಾಗದೆ ವಿವೇಚಿಸಿ ಉತ್ತರ ನೀಡು ॥
ಈ ಶಿವನು ವೇದಗಳ ವಿವರಣೆಯ ಪರಿಧಿಯ ಒಳಗೇ ಇದ್ದಾನೆ–ನಾಲ್ಕು ವೇದಗಳನ್ನೂ ತಂದವನೇ ಆತ.
ಬೂದಿಯನ್ನು ಹಚ್ಚಿಕೊಂಡಿರುವವನು ಈ ಶಿವನು-ಮಂದರಪರ್ವತವನ್ನೇ ಹೊತ್ತವನಾರಂಗನು ॥
ಆದಿರಾಕ್ಷಸರನ್ನು ಗೆದ್ದವನೀತ–ಲಕ್ಷ್ಮೀಪತಿಯೂ, ಮಧುಸಂಹಾರಿಯೂ ಆತನು ॥
ಮನ್ಮಥನನ್ನು ಸುಟ್ಟವನು ಇವನು-ಮನ್ಮಥನನ್ನು ಪಡೆದವನು ಆತನು ॥
ಗಂಗೆಯನ್ನು ತಲೆಯಮೇಲೆ ಹೊತ್ತಿರುವವನು ಇವನು–ಗರುಡವಾಹನನನ್ನು ಹತ್ತಿದವನು ಆತನು ॥
ಪವಿತ್ರವಾದ ಹೆಳವನಕಟ್ಟೆಯಲ್ಲಿರುವ ಲಿಂಗರೂಪಿ ಶಿವನು ಈತನು- ರಂಗನಾಥ ನಾಮಕನು ಆತನು ॥

ವಿ. ವಿ :- ಈ ರಚನೆಯಲ್ಲಿ ಲಿಂಗರೂಪಿ ಈಶ್ವರ ಹಾಗೂ ರಂಗನಾಥದೇವರು ಇವರುಗಳ ಇರವು ಮತ್ತು ಗುಣಾದಿಗಳನ್ನು ಪರಸ್ಪರ ತುಲನ ಮಾಡುತ್ತ ಹರಿಸರ್ವೋತ್ತಮನೆಂಬ ಅಭಿಪ್ರಾಯವನ್ನು ಪ್ರಕಾಶ ಪಡಿಸಲಾಗಿದೆ ಎನ್ನಬಹುದು.

ರಾಣಿಬೆನ್ನೂರಿನ ಭಿಷ್ಟಪ್ಪ ಎಂಬುವವರ ಮಗಳು ಗಿರಿಯಮ್ಮನು ಮಲೆಬೆನ್ನೂರಿನ ಶ್ಯಾನುಭೋಗ ತಿಪ್ಪರಸನ ಮಡದಿಯಾದರೂ ಜನ್ಮಾವಧಿ ಬ್ರಹ್ಮಚರ್ಯ ಪಾಲಿಸುತ್ತ ಶ್ರೀ ಗೋಪಾಲದಾಸರಿಂದ ಕೊಡಲ್ಪಟ್ಟ ಗೋಪಾಲಕೃಷ್ಣನ ಪ್ರತೀಕವನ್ನು ಆರಾಧಿಸುತ್ತ (ಪುತ್ರ ವಾತ್ಸಲ್ಯದಿಂದ) ಸಾಕ್ಷಾತ್ಕಾರ ಪಡೆದು ಪುನೀತಳಾದ ಮಹನೀಯಳು. ಹೆಳವನಕಟ್ಟೆಯ ರಂಗ ಎಂಬ ಅಂಕಿತದಿಂದ ಹಲವಾರು ದೇವರನಾಮಗಳು; ಚಂದ್ರಹಾಸ, ಕಾಲೀಯ ಮರ್ದನ ಮೊದಲಾದ ಕಥೆಯನ್ನರುಹುವ ಹಾಡುಗಳನ್ನು ರಚಿಸಿದ್ದಾಳೆ. ಈಕೆ ಯಶೋದೆ, ಕೌಸಲ್ಯೆ, ಎಂದು ಮೊದಲಾಗಿ ಈಕೆಯ ಭಕ್ತರ ಭಾವನೆ. ಹೆಳವನಕಟ್ಟೆಯ (ಪಂಗುತೀರ್ಥದ) ಸಮೀಪದಲ್ಲಿ ಶ್ರೀ ರಂಗನಾಥನ ದೇವಾಲಯವುಂಟು. ಆ ಆವರಣದಲ್ಲೇ ಶಿವನ ಪ್ರತೀಕವೂ ಉಂಟು. ಗಿರಿಯಮ್ಮನ ಆರಾಧ್ಯಮೂರ್ತಿ ಈ ರಂಗನಾಥನು.

ವೇದಗಳು :- ಇವು ಅಪೌರುಷೇಯ ಗ್ರಂಥಗಳ ರಾಶಿ. ಇವುಗಳಲ್ಲಿ ಬ್ರಹ್ಮ ಜ್ಞಾನ ಪಡೆಯಲು ಆಚರಿಸಬಹುದಾದ ಕರ್ಮಗಳು,ಭಗವಂತನ ಮಹಿಮಾತಿಶಯಗಳು ಹೇಳಲ್ಪಟ್ಟಿವೆ. ಋಕ್, ಯಜುರ್, ಸಾಮ ಮತ್ತು ಅಥರ್ವಣವೆಂದು ಇವು ನಾಲ್ಕು ಬ್ರಹ್ಮನ ನಾಲ್ಕು ಮುಖಗಳಿಂದ ಹೊರ ಬಂದುವಂತೆ. ಪ್ರಥಮತಃ ಯಜುರ್ವೇದ ವೊಂದೇ ಇದ್ದು ಕೃಷ್ಣದ್ವೈಪಾಯನ ವ್ಯಾಸರು ಅವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಶಿಷ್ಯರುಗಳ ಮೂಲಕ ಪ್ರಚಾರಕ್ಕೆ ತಂದರೆಂದು ಶಾಸ್ತ್ರಗಳು ಹೇಳುವುವು.

ಪ್ರಳಯ ಕಾಲದಲ್ಲಿ ಚತುರ್ಮುಖ ಬ್ರಹ್ಮನು ನಿದ್ರಾಭಿಭೂತನಾಗಿರಲು ಆತನ ಚತುರ್ಮುಖಗಳಿಂದಲೂ ವೇದಗಳು ಹೊರಹೊಮ್ಮುತ್ತಿರಲು ಹಯಗ್ರೀವನೆಂಬ ದೈತ್ಯನು ಅವನ್ನು ಅಪಹರಿಸಿದನು. ಮಹಾವಿಷ್ಣುವು ಮತ್ಸ್ಯರೂಪವೆತ್ತಿ ಆ ದೈತ್ಯನನ್ನು ಕೊಂದು ವೇದಗಳನ್ನು ರಕ್ಷಿಸಿದನು. ಅಥವಾ ಸೋಮಕನೆಂಬ ರಕ್ಕಸನು ವೇದಗಳನ್ನು ಕದ್ದೊಯ್ಯಲು ವಿಷ್ಣುವು ಮತ್ಸ್ಯಾವತಾರ ತಾಳಿ ದೈತ್ಯನನ್ನು ಸೀಳಿ ವೇದಗಳನ್ನು ಉದ್ಧರಿಸಿದನು.

<u>ಭುವನಗಿರಿಯ ಪೊತ್ತ</u> :- ಅಮೃತಮಥನಕ್ಕಾಗಿ ದೇವತೆಗಳೂ, ದೈತ್ಯರೂ ಸೇರಿ ಕ್ಷೀರ ಸಮುದ್ರವನ್ನು ಮಥಿಸಲು ಮಂದರಪರ್ವತವನ್ನು ಕಡೆಗೋಲು ಮಾಡಿಕೊಂಡಾಗ ಅದು ಸಮುದ್ರದಲ್ಲಿ ಮುಳುಗಲು ವಿಷ್ಣುವು ಕೂರ್ಮಾವತಾರ ತಾಳಿ ಆ ಪರ್ವತವನ್ನು ತನ್ನ ಬೆನ್ನಿನ ಮೇಲೆ ಎತ್ತಿ ಹಿಡಿದಿದ್ದನಂತೆ. ಅದೇ <u>ಭುವನಗಿರಿ.</u>

<u>ಆದಿದೈತ್ಯರು</u> :- (೧) ಕಶ್ಯಪರಿಗೆ ದಿತಿಯಲ್ಲಿ <u>ಅಂಧಕಾಸುರನು</u> ಜನಿಸಿದನು. ಇವನು ಈಶ್ವರನಿಂದ ಹತನಾದನು. [ಹ. ಮ-೬೬]

(೨) ಹಿರಣ್ಯಾಕ್ಷ ಹಿರಣ್ಯಕಶಿಪು ಎಂಬ ರಾಕ್ಷಸರ ತಂಗಿ ಸಿಂಹೆಯು ವಿಪ್ರಚಿತ್ತಿ ಎಂಬ ದಾನವನ ಪತ್ನಿ. ಇವರ ಮಗ ಅನ್ಧಕಾಸುರ. ಈ ದುಷ್ಟನು ದೇವತಾಸ್ತ್ರೀಯರ ಪಾತಿವ್ರತ್ಯ ಹರಣ ಮಾಡಿ ಪಾರ್ವತೀ ದೇವಿಯನ್ನೂ ಆಶಿಸಲು ಶಂಕರನು ಇವನನ್ನು ಸಂಹಾರ ಮಾಡಿದನು. (ವಿ. ಪುರಾಣ)

<u>ಮಾಧವ</u> :-ಅಮೃತಕ್ಕಾಗಿ ಕಡಲನ್ನು ಕಡೆದಾಗ ಹುಟ್ಟಿಬಂದ ಲಕ್ಷ್ಮೀದೇವಿಯು ನಾರಾಯಣನಿಗೆ ಪತ್ನಿಯಾಗಲು ಆತನು <u>ಮಾಧವನಾದನು.</u>

<u>ಮಧುಸೂದನ</u> :- ಮಹಾಪ್ರಳಯದಲ್ಲಿ ಮಲಗಿದ್ದ ಮಹಾವಿಷ್ಣುವಿನ ಕಿವಿಯಿಂದ ಹೊರ ಬಂದ ರಾಕ್ಷಸ ಮಧುವೆಂಬುವವನು. ಇವನ ಸಹೋದರ ಕೈಟಭನು. ಈ ರಾಕ್ಷಸರು ಚತುರ್ಮುಖ ಬ್ರಹ್ಮನನ್ನು ಹಿಂಸಿಸಲು ವಿಷ್ಣುವು ಎಚ್ಚೆತ್ತು ಈ ದಾನವರಿಂದಲೇ ವರಪಡೆದು ತನ್ನ ತೊಡೆಯ ಮೇಲೆ ಇವರನ್ನು ಸಂಹರಿಸಿ ಮಧುಸೂದನನಾದನು.

<u>ಮದನನನುರುಹಿದ</u> :-ಮದನನೇ ಮನ್ಮಥ. ಈ ನ ಸಹೋದರಿ ಸಂಧ್ಯೆ, ಈ ಇಬ್ಬರು ಚತುರ್ಮುಖ ಬ್ರಹ್ಮನ ಮಕ್ಕಳು. ಮದನನು ಜಗತ್ತನ್ನು ಮೋಹಗೊಳಿಸುವ ಶಕ್ತಿಯನ್ನು ತಂದೆಯಿಂದ ಪಡೆದು ಅದನ್ನು ತನ್ನ ತಂದೆಯ ಮೇಲೆಯೆ ಪ್ರಯೋಗಿಸಲು ಬ್ರಹ್ಮನ ಮನಸ್ಸು ಮಗಳ ಕಡೆಗೆ ಒಲಿಯಿತು. ಆಗ ಈಶ್ವರನು ಬ್ರಹ್ಮನಿಗೆ ತಿಳುವಳಿಕೆ ಕೊಡಲು ಶಿವನ ಫಾಲನೇತ್ರದಿಂದ ಸುಟ್ಟು ಹೋಗುವಂತೆ ಬ್ರಹ್ಮ ಮಗನಿಗೆ ಶಾಪವಿತ್ತನು. ಪತಿನಿಂದೆಯನ್ನು ಕೇಳಲಾಗದೆ ದಕ್ಷಬ್ರಹ್ಮನ ಯಜ್ಞಕುಂಡದಗ್ನಿಯಲ್ಲಿ

ಶಂಕರನ ಪತ್ನಿಯಾದ ದಾಕ್ಷಾಯಣಿಯು ದೇಹತ್ಯಾಗ ಮಾಡಲು ಶಿವನು ದಕ್ಷಿಣಾ ಮೂರ್ತಿಯಾಗಿ ತಪಸ್ಸಿಗೆ ಕುಳಿತನು. ಪರ್ವತನಂದಿನಿ ಪಾರ್ವತೀದೇವಿಯು ಶಿವನನ್ನು ಮೆಚ್ಚಿಸಲು ತಪಸ್ಸಿಗೆ ನಿಂತಳು. ಈಶ್ವರನನ್ನು ಎಚ್ಚರಗೊಳಿಸಲು (ದೇವತೆಗಳಿಗಾಗಿ) ಮನ್ಮಥನು ಪುಷ್ಪಬಾಣವನ್ನು ಪ್ರಯೋಗಿಸಿದ. ಎಚ್ಚೆತ್ತ ಶಂಕರನು ತನ್ನ ಫಾಲಾಗ್ನಿ ಯಿಂದ ಅವನನ್ನು ಸುಟ್ಟು ಹಾಕಿದನು. [ಶಿ. ಪು.]

ಮನ್ಮಥನನ್ನು ಪಡೆದನಾತ :- ಶ್ರೀಕೃಷ್ಣನಿಂದ ರುಕ್ಮಿಣೀದೇವಿಯಲ್ಲಿ ಪ್ರದ್ಯುಮ್ನನೆಂಬ ಹೆಸರಿನಲ್ಲಿ ಹುಟ್ಟಿದವನು ಮನ್ಮಥನ ಪ್ರತಿರೂಪ.

ಗಂಗೆಯ ಪೊತ್ತಾತನೀತ :- ಭಗೀರಥನು ದೇವಲೋಕದಿಂದ ಗಂಗೆಯನ್ನು ತರುವಾಗ ಅವನ ಪ್ರಾರ್ಥನೆಯಂತೆ ಇಳಿದ ಗಂಗೆಯನ್ನು ಭಗೀರಥನಿಗಾಗಿ ಶಿವನು ತನ್ನತಲೆಯಲ್ಲಿ ಧರಿಸಿ ಆಮೇಲೆ ಆಕೆಯನ್ನು ಹೊರಕ್ಕೆ ಬಿಟ್ಟನು. ಹೀಗೆ ಅವನು ಗಂಗಾಧರನು ಆದನು.

ಗರುಡವಾಹನ :- ಮಹಾಬಲಶಾಲಿಯಾದ ಗರುಡನೇ ವಿಷ್ಣುವಿನ ವಾಹನ.

## ಲಕ್ಷ್ಮೀದೇವಿಯ ಮೇಲೆ

ರಾಗ–ಮಧ್ಯಮಾವತಿ ತಾಳ–ಆದಿ

**ಪಲ್ಲವಿ :– ತೋರವ್ವ ಲಕುಮಿ ||**

**ಅ. ಪ :–ವೆಂಕಟಾದ್ರಿನಿಲಯನ ಪಂಕಜನಾಭನ್ನ ||**

**ಚ. ೧ –ವಸುದೇವದೇವಕಿಕಂದ–ಆ–ಶಶಿಮುಖಿರೊಡನೆ ಆನಂದ |**
**ಪಶುಗಳ ಕಾಯ್ದ ಗೋವಿಂದ–ಬಿಸಜನಾಭ ಮುಕುಂದನಮ್ಮ ||೧||**
**೨–ಸಾಮಜರಾಜಗೆ ವರದ-ಬಲು–ಪ್ರೇಮದಿ ಭಕುತರ ಪೊರೆದ |**
**ಆ ಮಹ ದಿತಿಜರ ತರಿದ–ನಿ | ಸ್ಸೀಮ ಮಹಿಮನಾಗಿ**
**ಮೆರೆದ ನಮ್ಮ ||೨||**
**೩–ಉರಗಗಿರಿಯಲ್ಲಿಪ್ಪ | ಅಂದು | ಮರುತನಪೆಗಲೇರಿ ಬಪ್ಪ |**
**ಶರಣರಿಗೊರವೀವ ತಪ್ಪ| ಸಿರಿಮೋಹನವಿಠಲ ತಿಮ್ಮಪ್ಪ ನಮ್ಮ ||೩||**

ಸ. ಅ :- ವೆಂಕಟಾಚಲವೆಂಬ ಹೆಸರಿನ ಬೆಟ್ಟದಲ್ಲಿ ನೆಲೆಸಿರುವವನೂ, ಕಮಲಪುಷ್ಪದಂತೆ ಹೊಕ್ಕುಳುಳ್ಳವನೂ; ವಸುದೇವ-ದೇವಕಿಯರ ಮಗನೂ, ಚಂದ್ರನಂತೆ ಮುಖವು [illegible] ಅಲ್ಲಿನ (ನಂದಗೋಕುಲದಲ್ಲಿನ) ಸ್ತ್ರೀಯರೊಂದಿಗೆ ಆನಂದದಿಂದ ವಿಹರಿಸು[illegible]ವನೂ, ಅಲ್ಲಿ ಹಸುಗಳನ್ನು ಕಾಯ್ದವನೂ ಕಮಲನಾಭನೂ, ಮುಕ್ತಿದಾತನೂ ಆದ ನಮ್ಮ ಗೋವಿಂದನನ್ನು ಲಕ್ಷ್ಮೀದೇವಿಯೆ ತೋರಿಸು. ಗಜರಾಜನಿಗೆ ವರಕೊಟ್ಟವನೂ (ಗಜೇಂದ್ರಮೋಕ್ಷ), ಭಕ್ತರನ್ನು ಅತಿ ಪ್ರೀತಿಯಿಂದ ಸಲಹುವವನೂ, ದಿತಿದೇವಿಯ ಮಕ್ಕಳಾದ ಅತ್ಯಂತ ಬಲಶಾಲಿ

ಗಳಾದ ರಾಕ್ಷಸರನ್ನೆಲ್ಲ ಕೊಂದವನೂ, ಅಪಾರವಾದ ತನ್ನ ಮಹಿಮೆಯಿಂದ ಪ್ರಕಾಶಿಸಿದವನೂ, ಆದ ಗೋವಿಂದನನ್ನು ತೋರಿಸು,

ತಿರುಪತಿಬೆಟ್ಟದಲ್ಲಿ ಇರುವವನೂ, ಆಂಜನೇಯನ ಹೆಗಲನ್ನೇರಿ ಬರುವವನೂ, ಆಶ್ರಯ ಕೋರಿದವರ ಇಷ್ಟಾರ್ಥವನ್ನು ತಪ್ಪದೆ ಕೊಡುವವನೂ, ಶ್ರೀ ಮೋಹನವಿಠಲನ ಹೃದಯಾಂತರ್ಗತನೂ ಆದ ನಮ್ಮ ಶ್ರೀ ತಿಮ್ಮಪ್ಪ (ಶ್ರೀನಿವಾಸ) ದೇವರನ್ನು (ಅಮ್ಮಾ) ಲಕ್ಷ್ಮೀದೇವಿ ತೋರಿಸು.

ವಿ. ವಿ :- ಲಕುಮಿ - ಲಕ್ಷ್ಮಿ - ವೆಂಕಟಾದ್ರಿ :- ವೆಂಕಟಾಚಲಪತಿ ದೇವನಿರುವ ಬೆಟ್ಟ, ನಿಲಯ - ಮನೆ; ಬಿಸಜ-ತಾವರೆ

ವಸುದೇವ-ದೇವಕಿಕಂದ: ಕೃಷ್ಣಾವತಾರದಲ್ಲಿ ಈ ದಂಪತಿಗಳಿಗೆ ಮಗನಾಗಿ ಜನಿಸಿದ ಮಗುವು (ಕೃಷ್ಣನು)

ಸಾಮಜರಾಜವರದಗೆ:- ಇಂದ್ರದ್ಯುಮ್ನನೆಂಬುವನು ಪಾಂಡ್ಯದೇಶದಲ್ಲಿ ಅರಸನಾಗಿದ್ದ ಪರಮ ವಿಷ್ಣುಭಕ್ತ ಇವನು ತಪೋನಿಷ್ಠನಾಗಿದ್ದಾಗ ಅಗಸ್ತ್ಯಋಷಿಗಳು ಬಂದರು. ಅವರನ್ನು ತಕ್ಕಂತೆ ಉಪಚರಿಸದಿದ್ದುದರಿಂದ ಋಷಿಗಳು ಕೋಪಗೊಂಡು ಆನೆಯಾಗು ವಂತೆ ಶಾಪವಿತ್ತರು. ಆ ಆನೆಯು ಒಂದು ಜಲಾಶಯದಲ್ಲಿ ನೀರು ಕುಡಿಯುತ್ತಿರುವಾಗ ಅದರಲ್ಲಿದ್ದ ಮೊಸಳೆಯು ಇದರ ಕಾಲನ್ನು ಹಿಡಿದು ಎಳೆಯತೊಡಗಿತು. ಪೂರ್ವಜನ್ಮ ಸಂಸ್ಕಾರದಿಂದ ಆನೆಯು ವಿಷ್ಣುವನ್ನು ಧ್ಯಾನಿಸಲು ಭಕ್ತಪರಾಧೀನನಾದ ದೇವನು ಆ ಮೊಸಳೆಯನ್ನು ಸಂಹರಿಸಿ ಆನೆಯನ್ನು ಕಾಪಾಡಿದನು.

ಉರಗಗಿರಿ :- ಹಾವಿನ ಆಕಾರದಲ್ಲಿ ಹಬ್ಬಿರುವುದರಿಂದ ತಿರುಪತಿಯ ಬೆಟ್ಟವನ್ನು ಶೇಷಾಚಲ, ಉರಗಾಚಲ, ಉರಗಗಿರಿ ಎಂದೆಲ್ಲ ಹೆಸರಿಸಿದ್ದಾರೆ.

ಮರುತನಪೆಗಲೇರಿ :- ರಾಮಾವತಾರದಲ್ಲಿ ಸಮುದ್ರವನ್ನು ದಾಟುವಾಗ, ರಾವಣನೊಂದಿಗೆ ಯುದ್ಧಕ್ಕೆ ನಿಂತಾಗ ಮೊದಲಾದ ಸಂದರ್ಭಗಳಲ್ಲೆಲ್ಲ ರಾಮನು ಆಂಜನೇಯನ ಹೆಗ ಲನ್ನು ಏರಿದ್ದನಷ್ಟೆ? ಅದೇ ಸನ್ನಿವೇಶದಉತ್ಸವವನ್ನು ಇಲ್ಲಿ ಹೇಳಲಾಗಿದೆ ಹಾಗೂ ವರದೋ ವಾಯುವಾಹನಃ ಎಂದು ವಿಷ್ಣುವಿನ ಸಹಸ್ರನಾಮದಲ್ಲಿ ಉಕ್ತವಾಗಿರುವಂತೆ ವಿಷ್ಣುವು ವಾಯುವಿಗೂ ಚಲನವನ್ನು ಉಂಟು ಮಾಡುವವನಾದುದರಿಂದಲೂ ವಾಯು ವಾಹನನಾಗಿದ್ದಾನೆ. ಅಥವಾ ಮರುತಃ ಸಪ್ತ ಆವಹಾದೀನ್‌ವಾಹಯತೀತಿ ವಾಯು ವಾಹನಃ'.

ಸಿರಿಮೋಹನವಿಠಲ :- ಶ್ರೀ ವಿಜಯದಾಸರ ಪಾಲಿತ ಪುತ್ರನೂ, ಶಿಷ್ಯನೂ ಆದ ಮೋಹನದಾಸರ ರಚನೆಯಿದು. ಗಂಡನನ್ನು ಕಳೆದುಕೊಂಡು, ದಾಯಾದಿಗಳಿಂದ ತಿರಸ್ಕರಿಸಲ್ಪಟ್ಟ ಈತನ ತಾಯಿಯು ತೌರನ್ನು ಸೇರಿದ ಮೇಲೆ ಹೆತ್ತ ಶಿಶುವೇ ಈತ. ನಿರ್ಗತಿಕಳಾಗಿ, ನಿಂದೆಯಿಂದ ಮನನೊಂದು ಮಗುವಿನೊಂದಿಗೆ ತುಂಗಭದ್ರೆಯನ್ನು ಪ್ರವೇಶಿಸಬೇಕೆಂಬ ಪ್ರಯತ್ನದಲ್ಲಿದ್ದಾಗ ನವವೃಂದಾವನದ ಸಮೀಪದಲ್ಲಿ ವಿಜಯ ದಾಸರ ಕರುಣೆಗೆ ಸಿಲುಕಿ ಅವರ ಆಶ್ರಯದಲ್ಲೇ ಬೆಳೆದು ಜ್ಞಾನಿಯಾದವರೀದಾಸರು. ಸಿರಿಮೋಹನವಿಠಲ, ಮೋಹನವಿಠಲ ಎಂಬುದು ಇವರ ಅಂಕಿತವು.

೧೧ ರಾಗ-ಆರಭಿ ತಾಳ-ಮಿ. ಛಾ.

## ಶ್ರೀ ಪುರಂದರದಾಸ ಕೃತ ಉಗಾಭೋಗ

(ಎ) ಒಂದುಕಾಲದಲ್ಲಿ ಆನೆಕುದುರೆಗಳ ಮೇಲ್ಮೆರೆಸುವೆ ।
ಒಂದುಕಾಲದಲ್ಲಿ ಬರಿಗಾಲಿನಲ್ಲಿ ನಡೆಸುವೆ ।
ಒಂದು ಕಾಲದಲ್ಲಿ ಮೃಷ್ಟಾನ್ನ ಉಣಿಸುವೆ ।
ಒಂದು ಕಾಲದಲ್ಲಿ ಉಪವಾಸ ವಿರಿಸುವೆ ।
ನಿನ್ನ ಮಹಿಮೆಗಳ ನೀನೆ ಬಲ್ಲೈಲ್ಲದೆ ।
ಅನ್ಯರು ಬಲ್ಲರೆ ಪುರಂದರವಿಠಲ ॥

ಸ. ಅ :- ಒಂದು ಕಾಲದಲ್ಲಿ ಆನೆ ಕುದುರೆಗಳ ಮೇಲೆ ಕೂರಿಸಿ ಮೆರವಣಿಗೆ ಮಾಡಿಸುವೆ।
ಇನ್ನೊಂದು ಕಾಲದಲ್ಲಿ ಬರಿಗಾಲಿನಲ್ಲಿ ನಡೆಯುವಂತೆ ಮಾಡುವೆ ।
ಒಂದುಕಾಲದಲ್ಲಿ ರಸಗವಳವನ್ನು ಊಟ ಮಾಡಿಸುವೆ ।
ಮತ್ತೊಮ್ಮೆ (ಆಹಾರವೇ ಇಲ್ಲದೆ) ಉಪವಾಸವಿರಿಸುವೆ
ಹೀಗೆ ನಿನ್ನ ದೊಡ್ಡಸ್ಥಿಕೆಯನ್ನು ನೀನೇ ಬಲ್ಲೆಯಲ್ಲದೆ
ಇತರರು ಅರಿಯಲಾಪರೆ ? (ಸಾಧ್ಯವಾಗದೆಂದು ಭಾವ.)

ವಿ. ವಿ :- (ಬಲ್ಲೆ + ಅಲ್ಲದೆ) = ತಿಳಿದಿರುವೆಯಲ್ಲದೆ.—

## ದುರ್ಗಾದೇವಿಯ ಮೇಲೆ

(ಬಿ) ದುರ್ಗೆ 'ಹಾಹಾ' ದುರ್ಗೆ ಮಂಗಳ ದುರ್ಗೆ ದುರ್ಗತಿ
ಕೊಡದಿರು ವಿಜಯವಿಠಲಪ್ರಿಯೆ ॥

ಸ. ಅ :- ಎಲೌ ಮಂಗಳಕರಳಾದ ದುರ್ಗಾದೇವಿಯೆ, ವಿಜಯವಿಠಲ ಸ್ವಾಮಿಯ
ಪ್ರಿಯಳೆ ಹೀನಸ್ಥಿತಿಯನ್ನು ಮಾತ್ರ ನನಗೆ ಕೊಡಬೇಡ.

ವಿ. ವಿ :- ದುರ್ಗೆ :- ರಮಾದೇವಿಯು ವಿಷ್ಣುವಿನ ಲಯಕಾರ್ಯಕ್ಕೆ ಸಹಾಯಕಳಾಗಬೇಕಾದ
ತಮೋಗುಣಪ್ರಧಾನವಾದ ದುರ್ಗಾರೂಪವನ್ನು ಧಾರಣೆ ಮಾಡುವಳು. ಅಗ ಆಕೆಯ
ಬಣ್ಣವು ನೀಲವಂತೆ.

(ಸಿ) ಅದ್ವೈತ ಮತ ಕೋಲಾಹಲರಿಪು ಶೂಲ ।
ಮಧ್ವರಾಯ ವಿಜಯ ವಿಠಲನ್ನ ಮನಃಪ್ರಿಯ ॥

ಸ. ಅ :- ಅದ್ವೈತಮತವೆಂದು ಪ್ರಲಾಪಿಸುವ ಶತ್ರುವಿಗೆ ಶೂಲಪ್ರಾಯನಾದ, ವಿಜಯ
ವಿಠಲಾಂತರ್ಗತ ಸ್ವಾಮಿಯ ಮನಸ್ಸಿಗೆ ಪ್ರೀತಿಕಾರಕನಾದ ಹೇ
ಮಧ್ವಗುರುವೇ ವಂದಿಸುವೆ

---

ಸೂಚನೆ :-ಈ ಮೇಲಿನ ಮೂರು ಖಂಡಗಳಲ್ಲಿ ಮೊದಲನೆಯದು ಪುರಂದರದಾಸ
ಕೃತವು. ಉಳಿದುವು ವಿಜಯದಾಸರವು.

# ಧನ್ವಂತರಿ ದೇವರ ಮೇಲೆ

೧೨ ರಾಗ–ಕಾಂಭೋಜಿ ತಾಳ–ಖಂ. ಛಾ.

ಪಲ್ಲ :- ಆವರೋಗವು ಎನಗೆ ದೇವಧನ್ವಂತ್ರಿ ||

ಅ. ಪ :- ಸಾವಧಾನದಲೆನ್ನ ಕರಪಿಡಿದ್ದೈಳೊ ||

ಚ. ೧- ಹರಿಮೂರ್ತಿಗಳು ಕಾಣಿಸವೆನ್ನ ಕಂಗಳಿಗೆ–ಹರಿಕೀರ್ತನೆಗಳು
ಕೇಳಿಸವು ಕಿವಿಗೆ |
ಹರಿಸ್ತೋತ್ರವೆನ್ನ ನಾಲಿಗೆಗೆ ಬಾರದಯ್ಯ-ಹರಿಯಾತ್ರೆಗೆನ್ನ
ಕಾಲೇಳದಯ್ಯಾ ||೧||

೨–ಹರಿಪಾದ ಪೂಜೆಗೆ ಹಸ್ತಗಳು ಚಲಿಸವು-ಹರಿಗುರುಗಳಂಘ್ರಿಗೆ
ಶಿರಬಾಗದು |
ಹರಿಯು ನಿರ್ಮಾಲ್ಯ ಆಘ್ರಾಣಿಸದು ನಾಸಿಕವು-ಹರಿಯುಚರು
ಜಿಹ್ವೆಗೆ ಸವಿಯಾಗದಯ್ಯ ||೨||

೩–ಅನಾಥಬಂಧು ಗೋಪಾಲವಿಠಲರೇಯ | ಎನ್ನಭಾಗದ
ವೈದ್ಯ ನೀನೆಯಾದಿ |
ಅನಾದಿಕಾಲದ ಭವರೋಗ ಕಳೆಯಯ್ಯ | ನಾನೆಂದಿಗೂ
ಮರೆಯೆ ನೀ ಮಾಡಿದುಪಕಾರ ||

ಸ. ಅ :- ದೇವನಾದ ಧನ್ವನ್ತರಿಯೇ ನನಗೇನು ಕಾಯಿಲೆ ?
ನನ್ನಕೈಹಿಡಿದು (ನಾಡಿ ಪರೀಕ್ಷಿಸಿ) ನಿದಾನವಾಗಿ (ಸಹನೆಯಿಂದ) ಪರೀಕ್ಷಿಸಿ ಹೇಳು.
ಹರಿಯ ಆಕಾರವು ನನ್ನ ಕಣ್ಣಿಗೆ ಕಾಣಿಸದು, ಹರಿಯ ಕೀರ್ತನೆಗಳು (ವೃತ್ತಾಂತವು) ನನ್ನ ಕಿವಿಗೆ ಕೇಳಿಸವು |
ಹರಿಯ ಸ್ತುತಿಯನ್ನು ನನ್ನ ನಾಲಿಗೆ ಉಚ್ಚರಿಸಲಾರದು–ಹರಿಯಾತ್ರೆಗೆ (ಭಗವದ್ದರುಶನಕ್ಕಾಗಿ ಸನ್ನಿಧಿಯನ್ನು ಅರಸಿಕೊಂಡು ಹೋಗಲು) ಕಾಲುಗಳೇ ನಡೆಯಲಾರವು ||
ಹರಿಯಪಾದಾರ್ಚನೆಗೆ ಕೈಗಳು ಒದಗವು, ಹರಿ ಮತ್ತು ಗುರುಗಳ ಪಾದಗಳಿಗೆ ತಲೆಬಾಗದು |
ಹರಿಯನ್ನು ಪೂಜಿಸಿದ ಪುಷ್ಪಗಳನ್ನು ಮೂಗು ಮೂಸದು–ಹರಿಗರ್ಪಿತ ನೈವೇದ್ಯವು ನಾಲಗೆಗೆ ರುಚಿಸದು ||
ಅನಾಥಬಂಧುವಾದ ಗೋಪಾಲವಿಠಲರಾಯನೆ, ನನ್ನ ಭಾಗದ ವೈದ್ಯನು ನೀನೇ ಆಗಿರುವಿ. ಅನಾದಿಕಾಲದ (ಜನ್ಮಾಂತರದಿಂದ ಅನುಸರಿಸಿ ಬಂದಿರುವ) ಈ ಲೌಕಿಕ ಸಂಬಂಧವಾದ ಕಾಯಿಲೆಯನ್ನು ಹೋಗಲಾಡಿಸಯ್ಯ. ನೀನು ಮಾಡಿದ ಉಪಕಾರವನ್ನು ನಾನು ಎಂದೆಂದಿಗೂ ಮರೆಯೆನು.

ವಿ. ವಿ :- 'ಮನಯೇವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ' ಎಂಬಂತೆ ನಮ್ಮ-ನಮ
ಬೇಕು-ಬೇಡಗಳಿಗೆ ಮನಸ್ಸು ಮೂಲಕಾರಣವಾದುದರಿಂದಲೇ ಹಿರಿಯರು ಮನಸ್ಸಿದ್ದ
ಮಾರ್ಗವೆಂದು ನುಡಿದಿದ್ದಾರೆ. ಹೀಗಿರುವಲ್ಲಿ ಹರಿಭಕ್ತರಾದ ದಾಸರು ಹರಿಗೆ ಸಂಬಂಧಿಸಿ
ಏನೊಂದು ಕರ್ಮಾಚರಣೆಗೂ ನಮ್ಮ ಕಣ್ಣು, ಕಿವಿ, ಮೂಗು, ನಾಲಗೆ, ಕೈ
ಕಾಲು ಮೊದಲಾದ ಅಂಗಗಳು ಸಿದ್ಧವಾಗದೆ ಜಡವಾಗಿವೆ ಎಂದು ಹಾಡಿರ
ವುದು. ಈ ಎಲ್ಲ ಅಂಗಗಳಿಂದಲೂ ಕೆಲಸ ಮಾಡಿಸಲು ಬೇಕಾದ ಮನಸ್ಸು ಸ್ಥಿರವಿಲ್ಲ
ಚಂಚಲವಾಗಿರುವುದೇ ಕಾರಣವೆಂಬುದನ್ನರಿತು ಆ ಚಂಚಲತೆಯು ನೀಗಿ ದೃಢಮನಸ್ಸು
ಇರುವಂತೆ ಪ್ರೇರಿಸೆಂದು ಗೋಪಾಲವಿಠ್ಠಲ ದೇವನನ್ನು ಪ್ರಾರ್ಥಿಸಿ ಜನತೆಗೂ ತಿಳಿವನ್ನು
ನೀಡಿದ್ದಾರೆ.

ದೇವಧನ್ವಂತ್ರಿ :- ಹಿಂದೆ ದೇವಾಸುರರು ಸಮುದ್ರವನ್ನು ಕಡೆದಾಗ ದಿವ್ಯಪುರು
ದೇವನು ಅಮೃತಕಲಶವನ್ನು ಕೈಲಿ ಹಿಡಿದು ಮೇಲಕ್ಕೆ ಬಂದನು. ಈತನೇ ಧನ್ವಂತ್ರಿ
ನಾಮಕ ದೇವತೆಗಳ ವೈದ್ಯನು.

ನಿರ್ಮಾಲ್ಯವೆಂಬುದು ದೇವರಿಗೆ ಪೂಜಿಸಿದ ತುಳಸೀ-ಪುಷ್ಪಾದಿಗಳು.

ದೇವರಿಗೆ ಅರ್ಪಿಸಿದ ನೈವೇದ್ಯಕ್ಕೆ ಚರು ಎನ್ನುವರು.

## ದೇವರ ಮೇಲೆ

೧೩ ಆನಂದಭೈರವಿ ತಾಳ–ಮಿ.ಛಾಪು

**ಪಲ್ಲ –ವೇಣುನಾದಪ್ರಿಯ–ಗೋಪಾಲಕೃಷ್ಣ–ವೇಣುನಾದಪ್ರಿಯ ||**
**ಅ. ಪ. –ವೇಣುನಾದ ವಿನೋದ ಮುಕುಂದ–ಗಾನಲೋಲ**
**ಶೃಂಗಾರ ಗೋಪಾಲ ||**
**ಚ. ೧ –ವಂದಿತ ಚರಣ–ವಸುದೇವನಾಭರಣ–ಇಂದಿರೆರಮಣ**
**ಇನಕೋಟಿ ತೇಜ |**
**ಮಂದರೋದ್ಧರ ಗೋವಿಂದ ಮುಕುಂದ–ಸಿಂಧುಶಯನ ಹರಿ–**
**ಕಂದರ್ಪಜನಕ ||**
**೨–ನವನೀತಚೋರ ನಂದಕುಮಾರ – ಭುವನೈಕವೀರ-ಬುದ್ಧಿವಿಶಾಲ |**
**ರವಿಕೋಟಿತೇಜ-ರಘುವಂಶರಾಜ–ದಿವಿಜವಂದಿತ–**
**ದನುಜಾರಿ ಗೋಪಾಲ ||೨||**
**೩–ಪರಮದಯಾಳು ಪಾವನಮೂರ್ತಿ-ಕ್ಷಿತಿಕೀರ್ತಿಹಾರ**
**ಶೃಂಗಾರಲೋಲ |**
**ಉರಗೇಂದ್ರಶಯನ ವರಹಯವದನ–ಶರಣ ರಕ್ಷಕ ಪಾಹಿ–**
**ಕೋದಂಡರಾಮ ||೩||**

ಸ. ಅ :–ಕೊಳಲಿನ ನಾದದಲ್ಲಿ ಪ್ರೀತಿಯುಳ್ಳವನೇ ಪಶುಪಾಲಕನಾದ ಕೃಷ್ಣ ಸ್ವಾಮಿಯೇ,
(ನಿನ್ನನ್ನಾಶ್ರಯಿಸುತ್ತೇನೆ.) ಎಲೈ ಮೋಕ್ಷವನ್ನು ಕೊಡುವವನೇ, ಹಾಡಿನಲ್ಲಿ

(ಸಂಗೀತದಲ್ಲಿ) ಆಸಕ್ತಿಯುಳ್ಳವನೇ, ಅಲಂಕೃತನಾದ ಗೋಪಾಲಸ್ವಾಮಿಯೆ (ನಿನ್ನನ್ನಾಶ್ರಯಿಸುತ್ತೇನೆ)

(ಭಕ್ತರಿಂದ) ನಮಸ್ಕರಿಸಲ್ಪಟ್ಟ ಪಾದಗಳುಳ್ಳವನೆ, ವಸುದೇವನಿಗೆ ಬೆಲೆಯುಳ್ಳ ಒಡವೆಯಂತಿರುವವನೆ, ಲಕ್ಷ್ಮೀಪತಿಯೆ, ಕೋಟಿಸೂರ್ಯ ಪ್ರಕಾಶನೇ, ಮಂದರಪರ್ವತವನ್ನು ಎತ್ತಿದವನೆ, ಸಮುದ್ರದಲ್ಲಿ ಮಲಗಿದವನೇ, ಮನ್ಮಥನ ತಂದೆಯೆ, ಹರಿಯೆ, ಗೋಪಾಲನೆ [ನಿನ್ನನ್ನಾಶ್ರಯಿಸುತ್ತೇನೆ.]

ಬೆಣ್ಣೆಯನ್ನು ಕದ್ದವನೆ, ನಂದನಮಗನೆ, ಪ್ರಪಂಚದಲ್ಲೆಲ್ಲ ಮೀರಿದಶೌರ್ಯವುಳ್ಳವನೆ, ವಿಸ್ತಾರವಾದ ಬುದ್ಧಿಯುಳ್ಳವನೆ. ಕೋಟಿಸೂರ್ಯ ಪ್ರಕಾಶನೆ, ರಘುವಂಶದ ರಾಜನೆ, ದೇವತೆಗಳಿಂದ ನಮಸ್ಕರಿಸಲ್ಪಟ್ಟವನೆ, ರಾಕ್ಷಸರಿಗೆ ಶತ್ರುವೆ, ಎಲೈ ಗೋಪಾಲನೆ (ನಿನ್ನನ್ನು ಆಶ್ರಯಿಸುತ್ತೇನೆ) ಅತ್ಯಂತ ದಯೆಯುಳ್ಳವನೆ, ಪರಿಶುದ್ಧವಾದ ಆಕಾರವುಳ್ಳವನೆ, ಭೂಮಿಯಲ್ಲಿ ಹೊಗಳಲ್ಪಟ್ಟ ಯಶಸ್ಸೆಂಬ ಹಾರವುಳ್ಳವನೆ, ಸರ್ಪರಾಜನ ಮೇಲೆ ಮಲಗಿರುವವನೆ, ಆಶ್ರಯಿಸಿದವರನ್ನು, ಕಾಪಾಡುವ ಹಸ್ತವುಳ್ಳವನೆ, ಬಿಲ್ಲನ್ನು ಹಿಡಿದ ರಾಮನೆ, ಕುದುರೆಯ ಮುಖದವನೆ (ಹಯವದನಸ್ವಾಮಿಯೆ) ನಿನ್ನನ್ನು ಆಶ್ರಯಿಸುತ್ತೇನೆ.

ವಿ. ವಿ :- ಗೋಪಾಲಕೃಷ್ಣ :- ಕೃಷ್ಣಾವತಾರದಲ್ಲಿ ಹಸುಗಳನ್ನು ಕಾಯುತ್ತಿದ್ದುದರ ಸೂಚನೆ.

ವೇಣುನಾದಪ್ರಿಯ :- ನಂದಗೋಕುಲದಲ್ಲಿ ಗೋಪಿಯರೊಂದಿಗೆ ವಿಹರಿಸುತ್ತ ಗೋಪಾಲರೊಂದಿಗೆ ಹಸುಗಳನ್ನು ರಕ್ಷಿಸುತ್ತ ಇರುತ್ತಿದ್ದಾಗ ಶ್ರೀಕೃಷ್ಣನು ತನ್ನ ಮುರಳೀ ನಾದದಿಂದ ಆನಂದಿಸುತ್ತ ಚರಾ-ಚರವನ್ನೆಲ್ಲ ಮೋಹಗೊಳಿಸುತ್ತಿದ್ದನಂತೆ. ಶ್ರೀಮದ್ಭಾಗವತದಲ್ಲಿ ಶ್ರೀಶುಕರು ಕೃಷ್ಣನ ವೇಣುವಾದನವನ್ನು ಕುರಿತು -

೧. ವಾಮಬಾಹುಕೃತ ವಾಮಕಪೋಲೋ-ವಲ್ಗಿತ ಭ್ರುರಧರಾರ್ಪಿತವೇಣುಮ್ ।
ಕೋಮಲಾಂಗುಲಿಭಿರಾಶ್ರಿತಮಾರ್ಗಂ ಗೋಪ್ಯ ಈರಯತಿಯತ್ರಮುಕುಂದಃ ॥

೨. ವೃಂದಶೋ ವ್ರಜವೃಷಾಮೃಗಗಾವೋ ವೇಣುವಾದ್ಯ ಹೃತಚೇತಸ ಆರಾತ್ ।
ದನ್ತದಷ್ಟಕಬಲಾ ಧೃತಕರ್ಣಾನಿದ್ರಿತಾಲಿಖಿತಚಿತ್ರಮಿವಾಸನ್ ॥ ಎಂದರೆ

೧. ಎಡತೋಳಿನ ಮೇಲೆ ಎಡಕೆನ್ನೆಯನ್ನಿಟ್ಟುಕೊಂಡು, ಹುಬ್ಬನ್ನು ಕೊಂಕಿಸಿ, ತುಟಿಗಳನಡುವೆ ಕೊಳಲನ್ನಿಟ್ಟು ತನ್ನ ಮೃದುವಾದ ಬೆರಳುಗಳಿಂದ ಮಾರ್ಗ ಸಂಗೀತವನ್ನು ನುಡಿಸುತ್ತಿರಲು ಗೋಪಿಕೆಯರು ಆ ಮುಕುಂದನೆಡೆಗೆ ಮುನ್ನುಗ್ಗುತ್ತಿದ್ದರಂತೆ.

೨. ಆ ಗೋಕುಲದಲ್ಲಿನ ಎತ್ತು, ಹಸು, ಜಿಂಕೆ ಮೊದಲಾದ ಪ್ರಾಣಿಗಳು ಗುಂಪುಗುಂಪು ಸೇರಿ ಆ ವೇಣುನಾದದಿಂದ ಆಕರ್ಷಿಸಲ್ಪಟ್ಟವುಗಳಾಗಿ ಹಲ್ಲಿನಿಂದ ಕಚ್ಚಿದ ಗ್ರಾಸವನ್ನು ಹಾಗೆಯೆ ಇಟ್ಟುಕೊಂಡು, ಕಿವಿಗಳನ್ನು ಎತ್ತಿಕೊಂಡು ನಿಶ್ಚೇಷ್ಟಿತವಾಗಿ ಕೇಳುತ್ತ ನಿಂತಿರಲು ಅವು ನಿದ್ರಿಸುತ್ತ ಇರುವಂತೆ ಬರೆದ ಚಿತ್ರಗಳ ಹಾಗೆ ಇದ್ದುವಂತೆ.

ಮುಕುಂದ:- 'ಮುಕ್ತಿಂದದಾ ತೀತಿಮುಕುಂದಃ' ಮೋಕ್ಷವನ್ನು ಕೊಡುವವನಾದುದರಿಂ
ಮುಕುಂದನು.

ಗಾನವಿಲೋಲ :- 'ಮದ್ಭಕ್ತಾ ಯತ್ರಗಾಯಸ್ತಿ ತತ್ರತಿಷ್ಠಾಮಿ ನಾರದ' ಎಂದ
ಭಗವಂತನೇ ತನಗೆ ಗಾನದಲ್ಲಿರುವ ಆತ್ಯಾಸೆಯನ್ನು ಹೇಳಿದ್ದಾನೆ.

ಮಂದರೋದ್ಧರ:- ಅಮೃತಮಂಥನ ಕಾಲದಲ್ಲಿ ಕಡೆಗೋಲಾಗಿ ಉಪಯೋಗಿಸಬೇಕ
ಗಿದ್ದ ಮಂದರಪರ್ವತವು ಸಮುದ್ರದಲ್ಲಿ ಮುಳುಗಲು ವಿಷ್ಣುವು ಕೂರ್ಮಾವತಾರ ತಾ
ಆ ಪರ್ವತವನ್ನು ತನ್ನ ಬೆನ್ನಮೇಲೆತ್ತಿ ಹಿಡಿದಿದ್ದನಂತೆ

ನವನೀತಚೋರ :- ಎಳೆತನದಲ್ಲಿ ಗೋಕುಲದಲ್ಲಿ ಗೋಪಿಕಾ ಸ್ತ್ರೀಯರು ಸಂಗ್ರಹಿಸಿಟ್ಟ
ರುತ್ತಿದ್ದ ಬೆಣ್ಣೆ, ಮೊಸರು ಮೊದಲಾದುವನ್ನು ಅವರುಗಳಿಗೆ ತಿಳಿಯದಂತೆ ಕದ್ದು
ಜತೆಗಾರರಿಗೂ ತಿನ್ನಿಸಿ ತಾನೂ ಮೆಲ್ಲುತ್ತಿದ್ದನಂತೆ.

ದಿವಿಜವಂದಿತ :- ದೇವತೆಗಳಿಂದ ನಮಸ್ಕರಿಸಲ್ಪಟ್ಟವನು.

ದನುಜಾರಿ :- ದನು ಎಂಬುವವಳ ಮಕ್ಕಳಾದ ದಾನವರಿಗೆ ಶತ್ರುವು

ಉರಗೇಂದ್ರಶಯನ :- ಸರ್ಪರಾಜನಾದ ಆದಿಶೇಷನನ್ನೇ ಹಾಸಿಗೆಯನ್ನಾಗಿ ಉಳ್ಳವನ

ಹಯವದನ :- ಈ ದೇವರನಾಮವನ್ನು ರಚಿಸಿದವರು ಶ್ರೀ ವಾದಿರಾಜಸ್ವಾಮಿಗಳು
ಇವರು ಶ್ರೀ ವ್ಯಾಸರಾಯರ ಶಿಷ್ಯರು. ಸೋದೆಮಠದ ಪೀಠಾಧ್ಯಕ್ಷರಾಗಿದ್ದು ೧೨
ವರ್ಷಗಳಕಾಲ ಜೀವಿಸಿದ್ದು ಸಶರೀರ ಬೃಂದಾವನಸ್ಥರಾದ ಮಹಾತ್ಮರು. ಮಹಾಮಹಿ
ಮಾನ್ವಿತರಾಗಿದ್ದ ಇವರು ಅನೇಕ ವೈಷ್ಣವಶಾಸ್ತ್ರ ಗ್ರಂಥಗಳನ್ನು ರಚಿಸಿದ್ದಾರೆ ಇವ
ಉಪಾಸನಾಮೂರ್ತಿ ಹಯಗ್ರೀವದೇವರು. ತಮ್ಮ ಕೃತಿಗಳಿಗೆ ಅದೇ ಅಂಕಿ
ವಿಟ್ಟಿದ್ದಾರೆ.

೧೪ ಷಣ್ಮುಖಪ್ರಿಯ ತಾಳ–ಆದಿ

**ಪಲ್ಲ :–ಸೇವಿಸು ಕೃಷ್ಣ ಕಥಾಸಾರ । ಸೇವಿಸು ಕೃಷ್ಣ ಕಥಾಸಾರ ||**

**ಚ. ೧–ಆ ವಿಧಿತೃಣಪರಿಯಂತ–ಅಸಾರ–ಭಾವಿಸು ನಿರ್ಧಾರ ||೧||**

**೨–ಜಪತಪಗಳ ಮಾಡಲು ಬಲುಘೋರ–ಗುಪಿತ ಚಮತ್ಕಾರ ||೨||**

**೩–ಸುಖದ ವ್ಯಾಸೋಕ್ತಿಯು ಸುವಿಚಾರ–ಮುಕುತಿ ಮಹದ್ವಾರ ||೩||**

ಸ. ಅ :- ಶ್ರೀಕೃಷ್ಣ ಚರಿತ್ರೆಗೆ ಸಂಬಂಧಪಟ್ಟ ಮುಖ್ಯಾಂಶವೆಲ್ಲವನ್ನೂ ಬಿಡದೆ ಹೃದ್ಗತ
ಮಾಡಿಕೊ.

ಬ್ರಹ್ಮನಿಂದ ಹುಲ್ಲಿನವರೆವಿಗಿನದೆಲ್ಲ ನಿಸ್ಸಾರವಾದುವು ಎಂದು ದೃಢವಾಗಿ
ಅರಿತುಕೊ.

**ಆ ಬ್ರಹ್ಮಸ್ತಂಭ ಪರ್ಯಂತಂ ಅಸಾರಂ ಚಾಪ್ಯನಿತ್ಯಕಮ್**
**ವಿಜ್ಞಾಯ ಜಾತವೈರಾಗ್ಯೋ ವಿಷ್ಣುಪಾದೈಕ ಸಂಶ್ರಯಃ ||**

[ಬ್ರಹ್ಮಸೂತ್ರ ಭಾಷ್ಯ] ಎಂಬಂತೆ-

ಜಪ-ತಪಾದಿ ಕರ್ಮಾನುಷ್ಠಾನವು ಬಹುಕಠಿಣ. ಅವೆಲ್ಲ ಅತ್ಯಂತ ರಹಸ್ಯವಾದ ಕಾರ್ಯಕ್ರಮಗಳನ್ನೊಳಗೊಂಡಿವೆ.

ವ್ಯಾಸರು ಹೇಳುವ ಒಳ್ಳೆಯ ವಿಚಾರವು (ಅನನ್ಯ ಶರಣತೆಯಿಂದ ಮಾಡುವ ಕೃಷ್ಣಭಕ್ತಿಯು) ಮೋಕ್ಷಪ್ರಾಪ್ತಿಗೆ ತೆರೆದ ಬಾಗಿಲಿನಂತೆ.

ವಿ. ವಿ :- ಕರ್ಮಾನುಷ್ಠಾನಕ್ಕೆ ಅನೇಕ ಬಗೆಯ ನೀತಿ ನಿಯಮಗಳುಂಟು. ಸರ್ವಸಾಧ್ಯವಲ್ಲ. ಆದುದರಿಂದ ಅದು ಬಹು ಕಠಿಣ. ಆದಕ್ಕೇ ದೊಡ್ಡವರು-

ಭಕ್ತ್ಯಾ ತುಷ್ಯತಿ ಕೇವಲಂ ನತುಗುಣೈಃ-ಭಕ್ತಪ್ರಿಯೋ ಮಾಧವಃ ॥ ಎಂದರೆ ಕೇವಲ ದೃಢಭಕ್ತಿಯಿಂದ ಮಾತ್ರ ಮಾಧವನು ಪ್ರೀತನಾಗುತ್ತಾನೆಂದು ಹೇಳಿರುವುದು.

ಇದು ಶ್ರೀ ವ್ಯಾಸರಾಯರ ರಚನೆ. ಕೃಷ್ಣನೆಂಬುದು ಅವರಿಟ್ಟ ಅಂಕಿತ.

೧೫ ರಾಗ-ಕಲ್ಯಾಣಿ ತಾಳ-ಆದಿ

ಪಲ್ಲ :-**ಹರಿಕಥಾಶ್ರವಣ ಮಾಡೊ-ಹರಿಕಥಾಶ್ರವಣ ಮಾಡೊ** ॥

ಅ. ಪ. :-**ಪಥವೈಕುಂಠಕಿದುನೋಡೊ** ॥

ಚ. ೧ :-**ಪತಿತಪಾವನನ ಪಾದಾಬ್ಜದಲಿ ಹಿತದಿಂದ ಭಕುತಿಯ ಮಾಡೊ** ॥೧॥

೨-**ಜ್ಞಾನಭಕುತಿವೈರಾಗ್ಯವನೀವ ಆನಂದತೀರ್ಥರಪಾಡೊ** ॥೨॥

೩-**ಅಜಭವಾದಿಗಳರಸನಾದ ಶ್ರೀ ವಿಜಯವಿಠ್ಠಲನ ಬೇಡೊ** ॥೩॥

ಸ. ಅ :- ಹರಿಕಥೆಯನ್ನು ಕೇಳು-ಕೇಳು

ವೈಕುಂಠಕ್ಕೆ ಹೋಗಲು (ಭಗವಂತನ ಸನ್ನಿಧಿಗೆ ಹೋಗಲು) ಇದೇ ಯುಕ್ತ ಮಾರ್ಗವು

ಪಾಪಿಷ್ಠರನ್ನು ಪರಿಶುದ್ಧಿಗೊಳಿಸುವ ದೇವನ ಪಾದಕಮಲದಲ್ಲಿ ಆಸಕ್ತಿಯಿಂದ ಭಕ್ತಿಯನ್ನು ಮಾಡು ॥

ಜ್ಞಾನ, ಭಕ್ತಿ, ವೈರಾಗ್ಯವನ್ನು ಕರುಣಿಸುವ ಆನಂದತೀರ್ಥ ಗುರುಗಳನ್ನು ಸ್ತುತಿಸು ॥

ಬ್ರಹ್ಮ-ರುದ್ರಾದಿಗಳಿಗೆ ಒಡೆಯನಾದ ಶ್ರೀ ವಿಜಯವಿಠಲ ಸ್ವಾಮಿಯನ್ನು ಪ್ರಾರ್ಥಿಸು ॥

ವಿ. ವಿ :- ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।

ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ ॥ ಎಂಬಂತೆ ಹರಿ ಕರುಣೆಯನ್ನು ಅಪೇಕ್ಷಿಸುವವರು ಪ್ರಥಮತಃ ಹರಿಕಥೆಯನ್ನು ಕೇಳಬೇಕು ಕೇಳಬೇಕೆಂದು ಅನುಭವಿಗ

ಳಾದ ದಾಸರು ಒತ್ತಿ ಒತ್ತಿ ಹೇಳಿದ್ದಾರೆ. ಇದರಿಂದ ಆ ಹರಿಯ ಮಹಿಮಾದಿ ವೃತ್ತಾಂತವೆಲ್ಲ ಹೃದ್ಗತವಾಗಿ ಕ್ರಮಶಃ ಮನಸ್ಸಿನ ಸಂಕೋಚ, ನಾಚಿಗೆ ಮೊದಲಾದ ಸ್ವಭಾವಗಳು ದೂರವಾಗಿ ಆಯಾವ್ಯಕ್ತಿಯ ಮನೋವೃತ್ತಿಗೆ ತಕ್ಕಂತೆ ಈ ಮೇಲೆ ಹೇಳಿದ ಒಂಭತ್ತು ಬಗೆಯ ಭಕ್ತಿಮಾರ್ಗದಲ್ಲಿ ಯಾವುದಾದರೊಂದಕ್ಕೆ ಬದ್ಧನಾಗಿ ಹರಿಯನ್ನು ಉಪಾಸಿಸುತ್ತ ಆತನ ಅಪಾರ ಕರುಣೆಗೆ ಪಾತ್ರನಾಗಿ ನಿತ್ಯಾನಂದವನ್ನು ಗಳಿಸಲು ಅವಕಾಶವುಂಟು. ಹೀಗೆ ನಂಬಿ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂಬ ದಾಸರ ಬೋಧೆಯನ್ನು ಅನುಸರಿಸಿ ಆನಂದತೀರ್ಥ ರಂತಹ ಗುರುಗಳನ್ನು ಆಶ್ರಯಿಸಿ ಜ್ಞಾನಗಳಿಸಿ, ವೈರಾಗ್ಯ ತಳೆದು ಭಗವಂತನನ್ನು ಕಾಣಬೇಕು. ಇದು ಪ್ರತಿ ಮಾನವನ ಆತ್ಮೋದ್ಧಾರ ಮಾರ್ಗ.

## ಶ್ರೀನಿವಾಸ ದೇವರ ಮೇಲೆ

೧೬ ರಾಗ–ಕಾಪಿ ತಾಳ-ಆದಿ

ಪಲ್ಲ :–ಇಂದು ನಿನ್ನ ಮರೆಯ ಪೊಕ್ಕೆ ವೆಂಕಟೇಶನೆ ||
ಅ.ಪ. :–ಎಂದಿಗಾದರೆನ್ನ ಕಾಯೊ ಶ್ರೀನಿವಾಸನೆ ||
ಚ. ೧ –ಶೇಷಗಿರಿಯ ವಾಸ ಶ್ರೀಶ–ದೋಷರಹಿತನೆ |
ಏಸುದಿನಕು ನಿನ್ನ ಪಾದ–ದಾಸನು ನಾನೆ ||
ಕ್ಲೇಶಗೈಸದಿರ್ಪುದೆನ್ನಸ್ವಾಮಿಯು ನೀನೆ ||೧||
೨–ಕಮಲನಯನ ಕಾಮಜನಕ ಕರುಣಾವಾರಿಧೆ |
ರಮೆಯನಾಳ್ವ ಕಮಲನಾಭ ಹೇ ದಯಾನಿಧೇ |
ಯಮನಪುರದಿ ಶಿಕ್ಷಿಸದಿರು ಪಾರ್ಥಸಾರಥೇ ||೨||
ಉರಗಶಯನ ಸುರರಿಗೊಡೆಯ ಸಿರಿಯ ರಮಣನೆ |
ಶರಣನೆಂಬೊ ಬಿರುದು ತೋರಿ–ಪೊರೆವ ದೇವನೆ |
ಕರುಣಿಸೆಮಗೆ ಮುಕುತಿಯ ಪುರಂದರವಿಠಲನೆ ||೩||

ಸ. ಅ :- ವೆಂಕಟೇಶದೇವನೆ ಈದಿನ (ನಾನು) ನಿನ್ನ ಆಶ್ರಯವನ್ನು ಪ್ರವೇಶಿಸಿದೆ (ಹೊಕ್ಕೆ) ನಿನಗೆ ಎಂದುನನ್ನಲ್ಲಿ ಕರುಣೆ ತೋರುವುದೋ ಅಂದಾದರೂ ನನ್ನನ್ನು ಕಾಪಾಡು.

ಹಾವಿನ (ಆಕಾರದ) ಬೆಟ್ಟದಲ್ಲಿ ನೆಲೆಸಿರುವವನೆ, ಲಕ್ಷ್ಮೀಪತಿಯೆ, ದೋಷ ದೂರನೆ, ಎಷ್ಟು ದಿನಕ್ಕಾದರೂ (ಎಂದೆಂದಿಗೂ) ನಾನು ನಿನ್ನ ಚರಣ ದಾಸನು. ನನಗೆ ಕಷ್ಟಕೊಡಬೇಡ, ನನ್ನ ಒಡೆಯನು ನೀನೆ.

ಕಮಲನೇತ್ರನೆ, ಮನ್ಮಥಜನಕನೆ, ಕರುಣಾಸಮುದ್ರನೆ, ರಮಾದೇವಿಯ ಒಡೆಯನೆ, ತಾವರೆಯಂತಿರುವ ಹೊಕ್ಕಳಿನವನೆ, ದಯಾಶಾಲಿಯೆ, ಯಮನ

ಪಟ್ಟಣದಲ್ಲಿ (ನರಕದಲ್ಲಿ) ನನ್ನನ್ನು ಶಿಕ್ಷೆಗೆ ಗುರಿಮಾಡಬೇಡ, (ಅರ್ಜುನನ ಸಾರಥಿಯೆ)

೩ ಹಾವಿನಮೇಲೆ ಮಲಗಿರುವವನೆ, ದೇವತೆಗಳ ಒಡೆಯನೆ, ಲಕ್ಷ್ಮೀಪತಿಯೆ, ಆಶ್ರಯಿಸಿದವರನ್ನು ಕಾಪಾಡುವವನೆಂಬ ನಿನ್ನ ಯಶಸ್ಸನ್ನು ತೋರಿಸಿ ಕಾಪಾಡಿದ ಪ್ರಭುವೆ, ಪುರಂದರವಿಠಲಾಂತರ್ಗತ ಸ್ವಾಮಿಯೆ ನಮಗೆ ಮುಕ್ತಿಯನ್ನು ಕರುಣಿಸು.

ವಿ. ವಿ :- ತಿರುಪತಿಯ ಬೆಟ್ಟದಲ್ಲಿ ನೆಲಸಿರುವ ದೇವರಿಗೆ ವೆಂಕಟೇಶ, ಶ್ರೀನಿವಾಸ ಎಂಬ ಹೆಸರುಗಳು ಉಂಟು.

ಪಾಪಮಾಡಿದವರನ್ನೆಲ್ಲ ಶಿಕ್ಷಿಸುವ ಸ್ಥಳವೇ ನರಕವೆಂಬುದು. ಅವರವರ ಪಾಪಕ್ಕೆ ತಕ್ಕಂತೆ ಅವರವರು ಶಿಕ್ಷೆ ಅನುಭವಿಸಬೇಕು.

ಪಾರ್ಥಸಾರಥೇ :- ಭಾರತ ಯುದ್ಧದಲ್ಲಿ ಶ್ರೀಕೃಷ್ಣರೂಪಿ ಪರಮಾತ್ಮನು ಅರ್ಜುನನ (ಪಾರ್ಥನ) ತೇರನ್ನು (ಯುದ್ಧಮಾಡಲು ಉಪಯೋಗಿಸುತ್ತಿದ್ದ ಕುದುರೆಯ ಗಾಡಿಯನ್ನು) ನಡೆಸುತ್ತಿದ್ದನಾಗಿ ಪಾರ್ಥಸಾರಥಿಯು.

ಶರಣನೆಂಬೊ ಬಿರುದು ತೋರಿ ಪೊರೆದ—ಗಜೇಂದ್ರಮೋಕ್ಷ, ಪ್ರಹ್ಲಾದ ಸಂರಕ್ಷಣೆ, ದ್ರೌಪದೀ ಮಾನರಕ್ಷಣೆ, ಧ್ರುವನಿಗೆ ಶಾಶ್ವತ ಪದವಿತ್ತುದು - ಈ ಪ್ರತಿಯೊಂದು ಸನ್ನಿವೇಶದಲ್ಲೂ ದೇವರು ತನ್ನ ಪರಮ ಭಕ್ತನಾಗಿದ್ದವರುಗಳನ್ನೆಲ್ಲ ರಕ್ಷಣೆ ಇತ್ತು ರಕ್ಷಿಸಿದ್ದಾನೆಂಬುದಕ್ಕೆ ಸಾಕ್ಷಿಭೂತವಾಗಿವೆ.

### ೧೭ ರಾಗ–ನಾದನಾಮಕ್ರಿಯೆ ತಾಳ–ಮಿ. ಛಾ.

ಪಲ್ಲ :–ದಾಸನ ಮಾಡಿಕೊ ಎನ್ನ ಸ್ವಾಮಿ ||

ಅ. ಪ :–ಸಾಸಿರನಾಮದ ವೇಂಕಟರಮಣ ||

ಚ. ೧ :-ದುರ್ಬುದ್ಧಿಗಳನ್ನೆಲ್ಲ ಬಿಡಿಸೋ ನಿನ್ನ ||
ಕರುಣಾಕವಚವೆನ್ನ ಹರಣಕ್ಕೆ ತೊಡಿಸೊ ||
ಚರಣಸೇವೆ ಎನಗೆ ಕೊಡಿಸೊ ಅಭಯ–
ಕರ ಪುಷ್ಪವೆನ್ನಯ ಶಿರದಲ್ಲಿ ಮುಡಿಸೊ ||೧||

೨–ದೃಢಭಕ್ತಿ ನಿನ್ನಲ್ಲಿ ಬೇಡಿ ನಾ–
ನಡಿಗೆರಗುವೆನಯ್ಯ ಅನುದಿನ ಪಾಡಿ ||
ಕಡೆಗಣ್ಣಲೇಕೆನ್ನ ನೋಡಿ ಬಿಡುವೆ ||
ಕೊಡು ನಿನ್ನ ಧ್ಯಾನವ ಮನಶುಚಿ ಮಾಡಿ ||೨||

೩–ಮರೆಹೊಕ್ಕವರ ಕಾವ ಬಿರುದು ಎನ್ನ ||
ಮರೆಯದೆ ರಕ್ಷಣೆ ಮಾಡಯ್ಯ ಪೊರೆದು ||
ದುರಿತಗಳೆಲ್ಲವ ತರಿದು ಸಿರಿ ||
ಪುರಂದರವಿಠ್ಠಲ ಎನ್ನನು ಪೊರೆದು ||೩||

ಸ. ಅ :- ಸಹಸ್ರನಾಮಗಳಿಂದ ಪೂಜೆ ಕೈಗೊಳ್ಳುವ ವೆಂಕಟರಮಣಸ್ವಾಮಿಯೆ, ನನ್ನನ್ನು ನಿನ್ನ ದಾಸನನ್ನಾಗಿ (ಸೇವಕನನ್ನಾಗಿ) ಮಾಡಿಕೊ

ನನ್ನಲ್ಲಿ ಮೈಗೂಡಿಕೊಂಡಿರುವ ಕೆಟ್ಟ ಬುದ್ಧಿಗಳನ್ನೆಲ್ಲ ತಪ್ಪಿಸು. ನಿನ್ನ ಪಾದಸೇವೆಯನ್ನ ನನಗೆ ಅನುಗ್ರಹಿಸು. ನಿನ್ನ ಕರುಣೆ ಎಂಬ ಹೊದಿಕೆಯನ್ನು ನನ್ನ ಪ್ರಾಣಕ್ಕೆ ಹೊದಿಸು, ಹೊಂದಿಸು. ಹೆದರಬೇಡವೆಂಬ ಭರವಸೆ ನೀಡುವ ಕೈ ಎಂಬ ಹೂವನ್ನು ನನ್ನ ತಲೆಯಮೇಲೆ ಇರಿಸು.

ನಿನ್ನಲ್ಲಿ ನನಗೆ ದೃಢಭಕ್ತಿ ಇರಬೇಕೆಂದು ಕೇಳಿಕೊಳ್ಳುತ್ತ ದಿನಂಪ್ರತಿ ಸ್ತುತಿಸುತ್ತ ಪಾದಗಳಿಗೆ ವಂದಿಸುವೆ ನನ್ನ ಮನಸ್ಸನ್ನು ಶುದ್ಧಿ ಮಾಡಿ ನಿನ್ನ ಸ್ಮರಣೆ ಮಾಡುವಂತೆ ಅನುಗ್ರಹಿಸು. ಕಡೆಗಣ್ಣಿನಿಂದ ನೋಡಿ ಅಲಕ್ಷ್ಯ ಮಾಡಬೇಡ.

ಆಶ್ರಯಿಸಿದವರನ್ನು ರಕ್ಷಿಸುವನೆಂಬ ಬಿರುದು ನಿನ್ನದು. ಆದುದರಿಂದನನ್ನನ್ನು ಮರೆಯಬೇಡ, ಕಾಪಾಡು. ನನ್ನ ಪಾಪಗಳನ್ನೆಲ್ಲ ಕತ್ತರಿಸಿ (ಹೋಗಲಾಡಿಸಿ) ಎಲೈ ಪುರಂದರವಿಠಲಾಂತರ್ಗತ ದೇವನೆ ರಕ್ಷಿಸು.

---

[ಸೂಚನೆ: ಈ ಮೇಲಿನ ಹಾಡನ್ನು ದಿವಂಗತ ಧರ್ಮಭೂಷಣ ಶ್ರೀ ಕುತ್ತೆತ್ತೂರು ಶ್ರೀ ಸೀತಾರಾಮರಾಯರು ತಮ್ಮ ಅಂತಿಮಕಾಲದಲ್ಲಿ [15–1–1968] ನಿರಂತರವಾಗಿ ಹೇಳಿಕೊಳ್ಳುತ್ತ ಅನಂತನ ಪಾದವನ್ನು ಸೇರಿದರು. ಆಗಿನಿಂದೀಚೆಗೆ ಭಜನ ಪದ್ಧತಿಯಲ್ಲಿ ಈ ಪದವನ್ನೂ ಸೇರಿಸಲಾಗಿದೆ.]

ಸೋದೆಯಲ್ಲಿ ವೃಂದಾವನಸ್ಥರಾಗಿರುವ

## ವಾದಿರಾಜಗುರುಗಳ ಮೇಲೆ

೧೮ ರಾಗ–ಭೈರವಿ ತಾಳ–ಮಿ. ಛಾ.

ಪಲ್ಲ :–ಕಂಡೆಕಂಡೆ ರಾಜರ–ಕಂಡೆ ಕಂಡೆ ||

ಅ. ಪ. :–ಕಂಡೆ ಕಂಡೆನು ಕರುಣನಿಧಿಯನು–ಕರಗಳಂಜಲಿ ಮಾಡಿಮುಗಿವೆನು||
ಲಂಡಮಾಯ್ಗಳ ಗುಂಡಿ ಒಡೆಯಲು–ದ್ದಂಡ ಮಾರುತಿ
ಪದಕೆ ಬರುವನ ||

ಚ. ೧ :-ಪಂಚವೃಂದಾವನದಿ ಮೆರೆಯುವ–ಪಂಚಬಾಣನ ಪಿತನ ಸ್ಮರಿಸುವ |
ಪಂಚನಂದನ ಮುಂದೆ ಆಗುವ-ಮಿಂಚಿನಂದದಿ
ಪೊಳೆವ ಮಹಿಮನ ||೧||

೨ :-ಪಂಕಪಾತಕ ಕಳೆವ ದೇವನ–ಪಂಕಜಾರಿನಿಭೇಂದುವಕ್ತ್ರನಾ |
ತಂಕವಿಲ್ಲದೆ ಭಜಿಪ ಸುಜನರ–ಶಂಕೆ ಬಿಡಿಸುವ ಶಂಕರೇಶನ ||೨||

೩ :-ಭಜಿಸುವವರಿಗೆ ಭಾಗ್ಯ ಕೊಡುವನ–ಋಜುಗಣೇ
ಶಾಮರೇಂದ್ರವಂದಿತ |
ನಿಜಪುರಂದರವಿಠಲೇಶನ–ಭಜನೆ ಮಾಡುವ ಭಾವಿ ಬ್ರಹ್ಮನ ||೩||

ಸ. ಅ :- ವಾದಿರಾಜರನ್ನು ನಿಜವಾಗಿಯೂ ನೋಡಿದೆ ನೋಡಿದೆನು.
ಕರುಣೆಗೆ ಕಡಲಿನಂತಿರುವ ಆ ರಾಜರ ದರ್ಶನ ಮಾಡಿದೆ. ಕೈಗಳನ್ನು ಬೊಗಸೆಮಾಡಿಕೊಂಡು ಮುಗಿಯುತ್ತೇನೆ. ಧರ್ಮಶ್ರದ್ಧೆಯಿಲ್ಲದ ಮಾಯಾವಾದಿಗಳ (ಸುಳ್ಳು ವಾಗ್ದಾನಮಾಡುವವರ) ಗುಂಡಿಗೆ (ಎದೆ) ಯನ್ನು ಭೇದಿಸಲು ಪ್ರಚಂಡನಾದ ಮಾರುತಿಯ ಪದವಿಗೆ ಬರಲಿರುವ ವಾದಿರಾಜನನ್ನು ಕಂಡೆ.
ಐದು ವೃಂದಾವನಗಳ ನಡುವೆ ಪ್ರಕಾಶಿಸುತ್ತ, ಮನ್ಮಥನ ತಂದೆಯಾದ ಕೃಷ್ಣನನ್ನು ಸ್ಮರಿಸುವ, ಪಂಚರೂಪಾತ್ಮಕನಾದ ಪರಮಾತ್ಮನ ಸಂಕರ್ಷಣ ರೂಪದಲ್ಲಿ ಪುತ್ರರಾಗಲಿರುವ (ವಾಯುಪದಕ್ಕೆ ಬರಲಿರುವ) ಮಿಂಚಿನಂತೆ ಪ್ರಕಾಶಿಸುತ್ತಲಿರುವ ಮಹಾಮಹಿಮನಾದ (ರಾಜನನ್ನು)
ಕೇವಲ ಕಲ್ಮಶಯುಕ್ತವಾದ ಪಾಪವನ್ನು ಹೋಗಲಾಡಿಸುವ, ಚಂದ್ರನಿಗೆ ಸಮನಾದ ಮುಖವುಳ್ಳ, ಸ್ವಲ್ಪವೂ ಆತಂಕವಿಲ್ಲದೆ ಭಜಿಸುವ ಸುಜನರನ್ನುಳ್ಳ, ಅನುಮಾನವನ್ನು ಪರಿಹರಿಸುವ, ಶಂಕರನಿಗೂ ನಿಯಂತೃವಾದ (ರಾಜನನ್ನು)

ಭಜಕರಿಗೆ ಭಾಗ್ಯದಾತನೂ, ಋಜುಗಣಗಳ ಈಶನೂ, ದೇವೇಂದ್ರಾದಿ ವಂದಿತನೂ, ಪುರಂದರವಿಠ್ಠಲೇಶ ಎಂಬ ಅಂಕಿತದ ಭಕ್ತನಿಂದ ಸ್ತುತಿಸಲ್ಪಡುವ ಮುಂದೆ ಬ್ರಹ್ಮನ ಪದವಿಗೆ ಬರುವ ವಾದಿರಾಜ ಗುರುವನ್ನು ದರ್ಶನ ಮಾಡಿದೆನು.

ವಿ. ವಿ:- ಪಂಚವೃಂದಾವನದಿ-ಬ್ರಹ್ಮ, ವಿಷ್ಣು, ಮಹೇಶ್ವರ ಮತ್ತು ವಾಯು-ಈ ನಾಲ್ವರ ಸನ್ನಿಧಾನ ವಿಶೇಷವುಳ್ಳ ನಾಲ್ಕು ವೃಂದಾವನಗಳ ನಡುವೆ ಸಶರೀರಿಗಳಾಗಿ ತಮ್ಮ ವೃಂದಾವನವನ್ನು ಸೇರಿದ ಶ್ರೀ ವಾದಿರಾಜರ ಸಮಾಧಿಯು ಸೋದೆಯಲ್ಲುಂಟು.

ಪಂಚಬಾಣನಪಿತ:-ಅರವಿಂದ ಮಶೋಕಂಚ, ಚೂತಂಚ ನವಮಲ್ಲಿಕಾ-ನೀಲೋತ್ಪಲಂಚ ಪಂಚೈತೇ ಪಂಚಬಾಣಸ್ಯ ಸಾಯಕಾಃ (ಇತ್ಯಮರಃ)- ಹೀಗೆ- ತಾವರೆ, ಅಶೋಕ, ಮಾವು, ಹೊಸಮಲ್ಲಿಗೆ, ನೈದಿಲೆ ಈವೈದೂ ಮನ್ಮಥನ ಬಾಣಗಳು. (ಇವೆಲ್ಲ ಕಾಮುಕರ ಮನಸ್ಸನ್ನು ಉದ್ರೇಕಿಸುವ ಪುಷ್ಪಗಳು) ಈ ಬಾಣಗಳ ಒಡೆಯ ನಾದ ಮನ್ಮಥನ ತಂದೆ ಶ್ರೀಕೃಷ್ಣನು.

ಪಂಚನಂದನ:- ಮುಂದೆ ಆಗುವ ಎಂಬುದಕ್ಕೆ ಪ್ರಾಣ ಪಾನವ್ಯಾನೋದಾನಸಮಾನ-ಈ ಪಂಚಪ್ರಾಣಗಳಿಗೆ ಆನಂದವುಂಟುಮಾಡುವವನೆಂದೂ ಕೆಲವರು ವಿವರಿಸುವುದುಂಟು.

ಪಂಕಜಾರಿನಿಭೇಂದುವಕ್ತ್ರ:- ಪಂಕಜ-ತಾವರೆ, ಇದರ ಅರಿ ಶತ್ರು-ಚಂದ್ರ. ಈತನಿಗೆ ನಿಜ ಸಮನಾದ, (ಚಂದ್ರೋದಯದಲ್ಲಿ ತಾವರೆಗಳು ಮುಚ್ಚಿಕೊಳ್ಳುವುದರಿಂದ ಅವಕ್ಕೆ ಚಂದ್ರನು ಅರಿಯೆಂದು ಕವಿಗಳ ಭಾವನೆ) ವಕ್ತ್ರ-ಮುಖವುಳ್ಳವ (ಚಂದ್ರನಂತಹ ಮುಖ) ಇಲ್ಲಿ ನಿಭ, ಚಂದ್ರ ಎಂಬ ಎರಡು ಪದಗಳ ಪ್ರಯೋಜನ ಕಾಣದು. ಕೇವಲ ತಾಳಗತಿಯ ಹೊಂದಿಕೆಗಾಗಿ ಇರಬೇಕು] ಪುರಂದರರಕಾಲ ೧೫೬೪. ವಾದಿರಾಜರದು. ೧೬೦೦. ಆದುರಿಂದ ಈ ರಚನೆ ಪುರಂದರದಾಸರದಲ್ಲ. ಪುರಂದರವಿಠ್ಠಲೇಶ ಅಂಕಿತದಿಂದ ವಾದಿರಾಜ ಭಕ್ತರಾರೋ ಮಾಡಿ ಅವರನ್ನು ಪ್ರತ್ಯಕ್ಷ ಕಂಡವರಂತೆಯೇ ಹಾಡಿದ್ದಾರೆ.

ಶಂಕರೇಶನ: ಶ್ರೀ ವಾದಿರಾಜರು ಮುಂದಿನ ವಾಯುಪದವಿಗೆ ಬರಲು ಸಿದ್ಧರಾಗಿರುವವರು. ಋಜುಗಣ ಪ್ರಮುಖರಲ್ಲಿ 'ಲಾತವ್ಯರ' ಸ್ಥಾನದಲ್ಲಿರುವವರು. ರುದ್ರದೇವರು ಇವರಲ್ಲಿ ೫೦ ಬ್ರಹ್ಮಕಲ್ಪ ವ್ಯಾಸಂಗಮಾಡಬೇಕಾಗಿರುವುದರಿಂದ ಅವರಿಗೆ ಶಿಷ್ಯರೂ ಆದಂತಾಯಿತು. ಹೀಗೆ ರಾಜರು ಶಂಕರೇಶರೂ ಆಗಿದ್ದಾರೆ.

ಭಜನೆ ಮಾಡುವ ಭಾವಿ ಬ್ರಹ್ಮರ ಎಂಬುದಕ್ಕೆ ಪ್ರತಿಯಾಗಿ ಭಾವಿಮರುತರ ಎಂಬ ಪಾಠಾಂತರವೂ ಇದೆ. ಬ್ರಹ್ಮ ಮತ್ತು ವಾಯು ಇವರುಗಳಿಗೆ ಪದವಿಯ ಸ್ಥಾನದಿಂದ ವ್ಯತ್ಯಾಸತೋರುವುದಾದರೂ ಇಬ್ಬರೂ ಒಂದೇ ಸಮಾನ ಗುಣವುಳ್ಳವರಾದುದರಿಂದ ಹೀಗೂ ಪ್ರಯೋಗಿಸಿರಬಹುದು.

# ಟೀಕಾಚಾರ್ಯರ ಮೇಲೆ

೧೯ ರಾಗ-ಶಂಕರಾಭರಣ ತಾಳ-ಮಿ. ಛಾ.

ಪಲ್ಲ :–ನೋಡು ನೋಡು ಟೀಕಾಚಾರ್ಯರ।

ಅ. ಪ :–ಮಾಡು ವಂದನೆಗಳ ಬೇಡು ವರಗಳ ||

ಚ. ೧:–ದುರ್ಮಾಯಿ ಮತಗಳ–ಮರ್ಮಭೇದಿಸಿ ಸುಧಾ-
ನಿರ್ಮಾಣ ಮಾಡಿದ–ಆರ್ಯರ ||೧||

೨–ಲಲಿತೋರ್ಧ್ವಪುಂಡ್ರ ಶ್ರೀ–ತುಲಸಿಭೂಷಿತ ಕರ್ಣ-
ವಿಲಸಿತಕಾಶಾಯ–ಧಾರ್‍ಯರ ||೨||

೩–ಯಾವಾಗಲು ವಾಸುದೇವವಿಠಲನ್ನ–
ಸೇವಿಸುವರ ಭಜಿ–ಸುವರ ||೩||

ಸ. ಅ :– ಟೀಕಾಚಾರ್ಯರನ್ನು ನೋಡು ನೋಡು ।
ನಮಸ್ಕಾರ ಮಾಡು ಇಷ್ಟಾರ್ಥಗಳನ್ನು ಬೇಡಿಕೊ
ಸುಳ್ಳುವಾದ ಮಾಡುವವರ ಅಭಿಪ್ರಾಯ (ಸಿದ್ಧಾಂತ)ದ ರಹಸ್ಯವನ್ನು ವಿಶದೀಕರಿಸಿ "ಸುಧಾ" ಎಂಬ ಗ್ರಂಥವನ್ನು ರಚಿಸಿದ ಪೂಜ್ಯರಾದ [ಟೀಕಾ ಚಾರ್‍ಯರನ್ನು ನೋಡು]
ಮನೋಹರವಾದ ಮೇಲ್ಮುಖವಾದ ಗಂಧದ ತಿಲಕದಿಂದ ಅಲಂಕೃತ ದೇಹ, ಶ್ರೀ ತುಲಸಿಯಿಂದ ಅಲಂಕೃತವಾದ ಕಿವಿ, ಹೊಳೆವ ಕಾವಿವಸ್ತ್ರಧಾರಣ ಮಾಡಿರುವ ಪೂಜ್ಯರನ್ನು ನೋಡು
ಯಾವಾಗಲು ವಾಸುದೇವ ವಿಠಲಾಂತರ್ಗತ ಸ್ವಾಮಿಯನ್ನು ಸೇವಿಸುವ ಹಾಗೂ ಭಜಿಸುವ [ಶ್ರೀ ಟೀಕಾಚಾರ್ಯರನ್ನು ನೋಡು]

ವಿ. ವಿ :-ಟೀಕಾಚಾರ್‍ಯರು :- ಶ್ರೀ ಮಧ್ವಾಚಾರ್ಯರು ತಮ್ಮ ಸಿದ್ಧಾಂತವನ್ನು ಸ್ಥಾಪಿಸಲು ಸ್ಥಳದಿಂದ ಸ್ಥಳಕ್ಕೆ ಪ್ರಯಾಣಮಾಡುತ್ತಿದ್ದಾಗ ಅವರ ಗ್ರಂಥಗಳೆಲ್ಲವನ್ನೂ ಹೊರುತ್ತಿದ್ದ ಎತ್ತು ಕಾಲಕ್ರಮದಲ್ಲಿ ಧೋಂಡೋಪಂತ್ ಎಂಬ ಮರಾಠಾ ದೇಶಪಾಂಡೆ ಬ್ರಾಹ್ಮಣನಾಗಿ ಜನ್ಮತಾಳಿ. ಕೆಲವು ಕಾಲ ಪ್ರಬಲ ಮಾಂಡಲಿಕನಾಗಿ ಅಧಿಕಾರಮಾಡಿ, ಮಧ್ವಾಚಾರ್ಯರ ಪ್ರತ್ಯಕ್ಷ ಶಿಷ್ಯರು ಅಕ್ಷೋಭ್ಯ ತೀರ್ಥರಿಂದ ಸನ್ಯಾಸ ಸ್ವೀಕರಿಸಿ ಅದೇ ಪೀಠಾಧಿಪತಿಗಳಾಗಿದ್ದವರು. ಜಯತೀರ್ಥರೆಂಬುದು ಇವರ ಆಶ್ರಮನಾಮ. ಮಧ್ವಾಚಾರ್‍ಯರ ಮೂಲಗ್ರಂಥಗಳಿಗೆ ಟೀಕೆ-ಟಿಪ್ಪಣಿಗಳಿಂದ ಕೂಡಿದ ಶ್ರೀಮನ್ನ್ಯಾಯ ಸುಧಾ, ಗೀತಾಭಾಷ್ಯ ಪ್ರಮೇಯದೀಪಿಕಾ ಮೊದಲಾದ ಗ್ರಂಥಗಳನ್ನು ರಚಿಸಿ ಟೀಕಾಚಾರ್ಯರೆನಿಸಿಕೊಂಡಿದ್ದಾರೆ. ದ್ವೈತಸಿದ್ಧಾಂತ ಪ್ರಮೇಯಗಳನ್ನರಿಯಲು ಇವರ ಗ್ರಂಥಗಳು ಅತ್ಯಂತ ಸಹಾಯಕಗಳು.

ವಾಸುದೇವವಿಠಲ :-ರಾಯಚೂರು ಜಿಲ್ಲಾ ದಿನ್ನಿ ಗ್ರಾಮದ ಜೋಯಿಸರು ಜನಾರ್ದನಾಚಾರ್ಯರ ಪೌತ್ರ, ಶ್ರೀ ವೆಂಕಟರಾಮಾಚಾರ್ಯರು ಜನ್ಮಾದಿ ೩೦ ವರ್ಷಗಳು ಕೇವಲ ಜಡರಂತೆ ಇರಲು ಶ್ರೀ ಗೋಪಾಲದಾಸರ ಸಲಹೆಯಂತೆ ಇವರ ತಂದೆ ಐ. ಜಿ. ಗ್ರಾಮದಲ್ಲಿದ್ದ ಶ್ರೀ ವೆಂಕಟನರಸಿಂಹಾಚಾರ್ಯರು ತಮ್ಮ ಮಗನ ಮುಂದೆ ತಾವು ವ್ಯಾಸಂಗ ಮಾಡಿದ್ದ ಸಕಲ ಶಾಸ್ತ್ರಾರ್ಥಗಳನ್ನೂ ಪ್ರವಚನ ಮಾಡುತ್ತ ಬರಲು ಕ್ಷಿಪ್ರದಲ್ಲಿ ವೆಂಕಟರಾಮಾಚಾರ್ಯರು ಸಕಲಶಾಸ್ತ್ರ ಪಂಡಿತರಾದರು. ಬಿಂಬಾ ಪರೋಕ್ಷಜ್ಞಾನ ಪಡೆಯಬೇಕೆಂಬ ಕುತೂಹಲದಲ್ಲಿ ರಾಮಾಚಾರ್ಯರು ಗೋಪಾಲದಾಸರ ಸೂಚನೆಯಂತೆ ಆಗ ಶ್ರೀ ರಾಘವೇಂದ್ರಸ್ವಾಮಿಗಳ ಮಠದಲ್ಲಿ ಪೀಠಾಧಿಪತಿಗಳಾಗಿದ್ದ ಶ್ರೀ ಭುವನೇಂದ್ರ ತೀರ್ಥರಿಂದ ಸನ್ಯಾಸವನ್ನು ಸ್ವೀಕರಿಸಿ ವ್ಯಾಸತತ್ತ್ವಜ್ಞರೆಂದು ಆಶ್ರಮನಾಮಸ್ವೀಕರಿಸಿ, ಶ್ರೀ ಗೋಪಾಲದಾಸರಿಂದ ಹರಿದಾಸದೀಕ್ಷೆ ಪಡೆದು ವಾಸುದೇವವಿಠಲ ಎಂಬ ಅಂಕಿತದಿಂದ ಅನೇಕ ಸುಳಾದಿಗಳು, ಪದಗಳನ್ನು ರಚಿಸಿದ್ದಾರೆ. ಈ ಮೇಲಿನದು ಅವುಗಳಲ್ಲೊಂದು.

## ಶ್ರೀಪಾದರಾಯರ ಮೇಲೆ

೨೦–ರಾಗ–ಶಂಕರಾಭರಣ ಚ. ರೂಪಕತಾಳ

**ಪಲ್ಲ :–ಮಹಿಮೆ ಸಾಲದೆ ಇಷ್ಟೇ ಮಹಿಮೆ ಸಾಲದೆ ||**

**ಅ. ಪ :–ಅಹಿಶಯನನ ಒಲುಮೆಯಿಂದ–ಮಹಿಮೆಯೊಳೆನ್ಮ-**
**ಶ್ರೀಪಾದರಾಯರ ||**

**ಚ. ೧ :–ಮುತ್ತಿನಕವಚ ಮೇಲ್ಕುಲಾಯಿ-ರತ್ನಕೆತ್ತಿದ ಕರ್ಣಕುಂಡಲ |**
**ಕಸ್ತೂರಿತಿಲಕ ಶ್ರೀಗಂಧಲೇಪನ–ವಿಸ್ತಾರದಿಂದ ಮೆರೆದು**
**ಬರುವ ||೧||**

**೨–ವಿಪ್ರಹತ್ಯ ದೋಷಬರಲು–ಕ್ಷಿಪ್ರಶಂಖೋದಕದಿಂ ಕಳೆಯೆ |**
**ಅಪ್ರಬುದ್ಧರು ದೂಷಿಸೆ ಗೇರೆಣ್ಣೆ–ಕಪ್ಪುವಸನ ಶುಭ್ರಮಾಡಿದ||೨||**

**೩–ಹರಿಗೆ ಸಮರ್ಪಿಸಿದ ನಾನಾ–ಪರಿಯ ಶಾಕಗಳನು ಭುಂಜಿಸೆ |**
**ನರರು ನಗಲು ಶ್ರೀಶಕೃಷ್ಣನ-ಕರುಣದಿಂದ ಹಸಿಯು ತೋರಿದ ||೩||**

ಸ. ಅ :–ಸರ್ಪಶಯನನಾದ ಶ್ರೀಮನ್ನಾರಾಯಣನ ಪ್ರೀತಿಯಿಂದ [ಅನುಗ್ರಹದಿಂದ] ಲೋಕದಲ್ಲಿ ನಮ್ಮ ಶ್ರೀಪಾದರಾಯರ ಪ್ರಶಂಸೆಯು ಹರಡಿರುವಷ್ಟೇ ಸಾಲದೆ ?

ಮುತ್ತನ್ನು ಪೋಣಿಸಿರುವ ಅಂಗಿ, ತಲೆಗೆ ಕುಲಾವಿ, ರತ್ನಖಚಿತವಾದ ಕಿವಿಯ ಆಭರಣ, ಇವನ್ನು ತೊಟ್ಟು, ಕಸ್ತೂರಿ ತಿಲಕವಿಟ್ಟು, ಶ್ರೀಗಂಧವನ್ನು ಪೂಸಿಕೊಂಡು [ಪ್ರಕಾಶವಾಗಿ] ಲೋಕಕ್ಕೆ ಕಾಣುವಂತೆ ಬೆಳಗುತ್ತ ಬರುವ (ಶ್ರೀಪಾದರಾಯರ) ಪ್ರಶಂಸೆಯು.

ಬ್ರಹ್ಮಹತ್ಯಾದೋಷಬಂದವನಿಗೆ ಶಂಖದಿಂಪ ನೀರನ್ನು ಪ್ರೋಕ್ಷಿಸಿ ಆ ದೋಷವನ್ನು ನಿವೃತ್ತಿ ಮಾಡಲು ಕುಕ್ಸಿತವಾಡಿದ ಅವಿವೇಕಿಗಳೆದುರಿಗೆ ಗೇರೆಣ್ಣೆಯಲ್ಲಿ ನೆನಸಿದ ಬಿಳಿಯ ವಸ್ತ್ರವನ್ನು ಶಂಖೋದಕ ಪ್ರೋಕ್ಷಿಸಿಯೇ ಶುಭ್ರಮಾಡಿ ತೋರಿದ (ಶ್ರೀಪಾದರಾಯರು ..........)
ದೇವರಿಗೆ ನೈವೇದ್ಯ ಮಾಡಿದ ಬಗೆಬಗೆಯ ಕಾಯಿಪಲ್ಯಗಳನ್ನು ತಿನ್ನಲು ಜನರು ಹಾಸ್ಯಮಾಡಿದಾಗ ಆ ಲಕ್ಷ್ಮೀಪತಿಯಾದ ಕೃಷ್ಣನ ಅನುಗ್ರಹದಿಂದ ಹಸಿಯಾದ ಆ ಕಾಯಿಪಲ್ಯಗಳನ್ನೇ ಹೊರತೆಗೆದು ತೋರಿದ (ಶ್ರೀಪಾದ ರಾಯರ...........)

ವಿ. ವಿ :- ಮುತ್ತಿನಕವಚ .....ಸಳುವ ನರಸಿಂಹನು ಚಂದ್ರಗಿರಿಯಲ್ಲಿ ರಾಜನಾಗಿದ್ದಾಗ ತಿರುಪತಿ ಶ್ರೀನಿವಾಸದೇವರ ಅರ್ಚಕರು ತಾವೇ ದೇವರೆಂಬಂತೆ ವಾಹನಾದಿಗಳ ಮೇಲೆ ಮೆರವಣಿಗೆಗೆ ಹೊರಡುತ್ತಿದ್ದುದನ್ನು ಕಂಡು ಅವರನ್ನೆಲ್ಲ ನಿರ್ನಾಮ ಮಾಡಿಸಿದನು. ಆ ಹತ್ಯಾದೋಷ ನಿವಾರಣೆಗಾಗಿ ರಾಜನು ಶ್ರೀಪಾದರಾಯರನ್ನು ಬೇಡಿಕೊಂಡು ಶಾಂತಿಕರ್ಮಗಳನ್ನು ಮಾಡಿಸಿ ಪಾಪವಿಮುಕ್ತನಾದನು. ತನ್ನ ಕೃತಜ್ಞತೆ ಸೂಚಿಸಿ ಶ್ರೀಪಾದ ರಾಯರನ್ನು ಗೌರವಿಸಲು ರಾಜನು ಆ ಯತಿಗಳನ್ನು ಮುತ್ತಿನ ಅಂಗಿ, ಕುಲಾವಿ ಮೊದಲಾದುವುಗಳಿಂದಲಂಕರಿಸಿ, ಸಿಂಹಾಸನದ ಮೇಲೆ ಕೂರಿಸಿ, ಕನಕಾಭಿಷೇಕ ಮಾಡಿಸಿದನಂತೆ. ಆ ಅಭಿಪ್ರಾಯವನ್ನು ಸೂಚಿಸುವ ಮೇಲಿನ ಕೃತಿಯನ್ನು ರಾಯರ ಶಿಷ್ಯರಾದ ಶ್ರೀ ವ್ಯಾಸರಾಯರೇ ರಚಿಸಿರುವುದು.
ಶ್ರೀಪಾದರಾಯರು :-ದ್ವೈತ ವೇದಾಂತ ಮತಸ್ಥಾಪಕರಾದ ಶ್ರೀ ಮಧ್ವಾಚಾರ್ಯರ ಪ್ರತ್ಯಕ್ಷ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರ ಪೀಳಿಗೆಯಲ್ಲಿ ಬಂದ ಶ್ರೀ ಸ್ವರ್ಣವರ್ಣ ತೀರ್ಥರಿಂದ ಸನ್ಯಾಸಸ್ವೀಕಾರ ಮಾಡಿದ ಶ್ರೀ ಲಕ್ಷ್ಮೀನಾರಾಯಣ ಯೋಗಿಗಳೇ ಕಾಲಕ್ರಮದಲ್ಲಿ ಶ್ರೀಪಾದರಾಯರೆಂದು ಕರೆಯಲ್ಪಟ್ಟರು. ಈಗಿನ ಕರ್ಣಾಟಕ ಪ್ರಾಂತದ ಕೋಲಾರ ಜಿಲ್ಲೆ ಮುಳಬಾಗಿಲು ಎಂಬಲ್ಲಿ ಇವರು ತಮ್ಮ ಮಠವನ್ನು ಸ್ಥಾಪಿಸಿದರು. ಇವರು ಮಹಾಮಹಿಮರು ಮತ್ತು ಪಂಡಿತರು. ಶ್ರೀ ವ್ಯಾಸರಾಯ ಮಠಾಧಿಪತಿಗಳಾಗಿದ್ದ ವ್ಯಾಸತೀರ್ಥರು (ವ್ಯಾಸರಾಯರು) ಇವರಲ್ಲಿ ವ್ಯಾಸಂಗ ಮಾಡಿದ ಶಿಷ್ಯರು.

## ಶ್ರೀ ವ್ಯಾಸರಾಯರ ಮೇಲೆ

೨೧ ರಾಗ–ಭೈರವಿ ತಾಳ–ಮಿ. ಛಾ.

ಪಲ್ಲ :– ಚಿತ್ತೈಸಿದ ವ್ಯಾಸರಾಯ–ಚಿತ್ತಜನಯ್ಯನ ಸಭೆಗೆ ||
ಅ. ಪ :– ನಿತ್ಯಮುತ್ತೈದೆಯರೆಲ್ಲ ಎತ್ತಿರತುನದಾರತಿಯ ||
ಚ. ೧– ಹೇಮ ಮಯವಾದ ದಿವ್ಯ–ವ್ಯೋಮಯಾನವನ್ನೇರಿ |
ಸ್ವಾಮಿ ವ್ಯಾಸರಾಯ ಪೊರಟ–ಪ್ರೇಮದಿಂದ ಹರಿಪುರಕೆ ||೧||

೨–ಹಾಟಕದ ಬೆತ್ತ ಕೋಟಿ–ಸಾಟಿಯಿಲ್ಲದೆ ಪಿಡಿದು ।
ನೀಟಾದ ಓಲಗದವರ-ಕೂಟಗಳ ಮಧ್ಯದಲ್ಲಿ ॥೨॥
೩–ಸಾಧು ವಿಪ್ರಜನರೆಲ್ಲ–ವೇದಘೋಷಣೆಯ ಮಾಡೆ ।
ನಾದವುಳ್ಳ ನಗಾರಿಯು-ಭೇದಿಸಿತು ನಾಲ್ಕುದಿಕ್ಕು ॥೩॥
೪–ಹೇಮಮಯಪಿಡಿಯುಳ್ಳ–ಚಾಮರಂಗಳನ್ನೆ ಪಿಡಿದು–
ಕಾಮಿನಿಮಣಿಯರು ಕೆಲದಿ-ಸ್ವಾಮಿಯೆಂದು ಬೀಸುತಿರೆ ॥೪॥
೫–ಅರವಿಂದಾಸನನಯ್ಯ-ಪುರಂದರವಿಠಲನು ।
ಸಿರಿಸಹಿತದಿ ಬಂದು–ಕರಪಿಡಿದೆತ್ತಿದ್ದು ಕಂಡೆ ॥೫॥

ಸ. ಅ :- ವ್ಯಾಸರಾಯರು ವಿಷ್ಣುವಿನ ಆಸ್ಥಾನಕ್ಕೆ (ವೈಕುಂಠಕ್ಕೆ) ದಯಮಾಡಿಸಿದರು. ಅಪ್ಸರೆಯರೆಲ್ಲ ರತ್ನದ ಆರತಿಯನ್ನು (ಅವರಿಗೆ) ಎತ್ತುತ್ತಿರಲು ಚಿನ್ನದಿಂದ ಆವರಿಸಲ್ಪಟ್ಟ ಆಕಾಶಯಾನವನ್ನೇರಿ ವ್ಯಾಸರಾಯ ಸ್ವಾಮಿಗಳು ಅತ್ಯಂತ ಸಂತೋಷದಿಂದ ವೈಕುಂಠಕ್ಕೆ ಹೊರಟರು.

ಹೋಲಿಕೆಗೆ ಅಳವಲ್ಲದಂತೆ ಚಿನ್ನದ ಅನೇಕ ಸಂಖ್ಯೆಯ ಬೆತ್ತಗಳನ್ನು ಹಿಡಿದುಕೊಂಡು ನಿಂತಿರುವವರ, ಸುಂದರವಾಗಿ (ಇಂಪಾಗಿ) ನಾದಸ್ವರವನ್ನು ಬಾರಿಸುತ್ತಿರುವವರ ಗುಂಪಿನ ನಡುವಿನಿಂದ (ಶ್ರೀ ವ್ಯಾಸರಾಯರು) ಹೊರಬಂದರು.

ಶುದ್ಧರಾದ (ಸರಳಸ್ವಭಾವದ) ಬ್ರಾಹ್ಮಣರೆಲ್ಲ ವೇದವನ್ನುಚ್ಚರಿಸುತ್ತಿರಲು ನಾಲ್ಕು ದಿಕ್ಕುಗಳೂ ಒಡೆದು ಹೋಗುವಂತೆ ನಗಾರಿಯ ಧ್ವನಿಯಾಗುತ್ತಿರಲು ಚಿನ್ನದ ಹಿಡಿಯುಳ್ಳ ಚಾಮರಗಳನ್ನು ಸ್ತ್ರೀಯರು ಹಿಡಿದು ಪಕ್ಕದಲ್ಲಿ ಸ್ವಾಮಿ ಎಂದು ಪರಾಕು ಹೇಳುತ್ತ ಬೀಸುತ್ತಿರಲು (ಶ್ರೀ ವ್ಯಾಸರಾಯರು....) ಬ್ರಹ್ಮನತಂದೆಯೂ ಪುರಂದರವಿಠಲಾಂತರ್ಗತ ಸ್ವಾಮಿಯೂ ಆದ ದೇವನು ಲಕ್ಷ್ಮೀದೇವಿಯೊಂದಿಗೆ ಬಂದು ಹಸ್ತಲಾಘವನ್ನಿತ್ತುದನ್ನು ಕಂಡೆನು ॥

ವಿ. ವಿ :- ಮಧ್ವಾಚಾರ್ಯರ ಪ್ರತ್ಯಕ್ಷ ಶಿಷ್ಯರಾದ ಅಕ್ಷೋಭ್ಯತೀರ್ಥರ ಪೀಳಿಗೆಯಲ್ಲಿ ಜಯತೀರ್ಥರು ವಿದ್ಯಾಧಿರಾಜರು, ರಾಜೇಂದ್ರರು ಹೀಗೆ ಬೆಳೆದು ಬಂದು ಕ್ರಮಶಃ ಬ್ರಹ್ಮಣ್ಯತೀರ್ಥರಿಂದ ಸನ್ಯಾಸ ಸ್ವೀಕಾರ ಮಾಡಿದವರು ಶ್ರೀ ವ್ಯಾಸರಾಯರು. ಇವರ ಶಿಷ್ಯರು ಪುರಂದರದಾಸರು. ಅಪರೋಕ್ಷಜ್ಞಾನಿಗಳಾಗಿದ್ದ ಶ್ರೀ ದಾಸರು ತಮ್ಮ ಗುರುಗಳ ಅಂತಿಮಯಾತ್ರೆಯನ್ನು ತಾವು ಕಂಡಂತೆ ಈ ಕೃತಿಯಲ್ಲಿ ಚಿತ್ರಿಸಿದ್ದಾರೆ- ಚಿತ್ತಜನು– ಮನಸಿನಲ್ಲಿ ಹುಟ್ಟಿದವನು. ಮನ್ಮಥ ಆತನ ಅಯ್ಯ-ವಿಷ್ಣು. ವ್ಯೋಮ- ಆಕಾಶ, ಅದರಲ್ಲಿ ಸಂಚರಿಸುವ ಯಾನ-ವಾಹನ, ವಿಮಾನ. ಹಾಟಕ-ಚಿನ್ನ.
ಅರವಿಂದಾಸನನು-ತಾವರೆಯನ್ನು ಆಸನವನ್ನಾಗಿ ಉಳ್ಳವನ (ಬ್ರಹ್ಮನ) ಆತನ, ಅಯ್ಯ- ತಂದೆ. ಬ್ರಹ್ಮನು ವಿಷ್ಣುವಿನ ನಾಭಿ ಕಮಲದಲ್ಲಿ ಜನಿಸಿದವನು. ಹೀಗೆ ವಿಷ್ಣುವು ಆತನ ತಂದೆ.

# ರಾಘವೇಂದ್ರ ಸ್ವಾಮಿಗಳ ಮೇಲೆ

೨೨ ರಾಗ-ಪಂತುವರಾಳಿ ತಾಳ-ಆದಿ

ಪಲ್ಲ :–ಚಂದ್ರ ಗುಣಸಾಂದ್ರ ರಾಘ-

ಅ. ಪ :–ವೇಂದ್ರ ಗುರುಸದ್ವೈಷ್ಣವ ಕುಮುದಕೆ ||

ಚ. ೧ :–ಶ್ರೀ ರಘುರಾಮ ಪದಾಂಬುಜಭೃಂಗ–ಮಾರುತಮತಶುಭ-
ವಾರಿನಿಧಿಗೆ ಪೂರ್ಣ ||೧||

೨ –ಶ್ರೀಕರ ಹರಿಯ ನಿರಾಕರಿಸುವ ದುಷ್ಟ–ಭೀಕರ ಮಾಯ್ಗಳ–
ಮುಖಕಮಲಕೆ ಪೂರ್ಣ ||೨||

೩ –<u>ವರದಗೋಪಾಲವಿಠಲನ</u> ವಾರ್ತೆಗೆ–ಹರುಷ ಬಡುವಹರಿ–
ಭಕುತ ಚಕೋರಕೆ ||೩||

ಸ. ಅ :– ಶ್ರೇಷ್ಠರಾದ ವಿಷ್ಣುಭಕ್ತರೆಂಬ ಕನ್ನೈದಿಲೆಗೆ ಚಂದ್ರನಂತಿರುವ, ಗುಣಪೂರ್ಣನಾದ ಶ್ರೀರಾಘವೇಂದ್ರ ಗುರುವೆ ವಂದನೆ.

ರಘುವಂಶಜನಾದ ಶ್ರೀ ರಾಮನ ಪಾದಗಳೆಂಬ ಕಮಲಪುಷ್ಪಗಳಲ್ಲಿ ದುಂಬಿಗಳಂತೆ ವಿಹರಿಸುವ; ವಾಯುವಿನ ಮತ (ಮಧ್ವಾಚಾರ್ಯರ ಮತ) ವೆಂಬ ಸಮುದ್ರಕ್ಕೆ ಪೂರ್ಣಚಂದ್ರನಂತಹವನಾದ ರಾಘವೇಂದ್ರ ಗುರುವೆ ವಂದನೆ.

ಸಂಪತ್ತನ್ನು ಕೊಡುವ ಹರಿಯನ್ನು ಕಡೆಗಣಿಸುವ ದುಷ್ಟರಾದ ಮಾಯಾವಾದಿಗಳೆಂಬ ಭಯಂಕರರ ಮುಖ ಪದ್ಮಗಳಿಗೆ ಪೂರ್ಣಚಂದ್ರನಂತಿರುವ (ರಾಘವೇಂದ್ರ ಗುರುವೆ ವಂದನೆ) ಚಂದ್ರೋದಯವಾಗಲು ಕಮಲಗಳು ಮುಚ್ಚಿಕೊಳ್ಳುತ್ತವೆ. ಆದುದರಿಂದ ಕಮಲಕ್ಕೆ ಚಂದ್ರನು ಶತ್ರುವೆಂದು ಕವಿಗಳ ವರ್ಣನೆ-ತದ್ವತ್[ಮಾಯಾವಾದಿಗಳನ್ನು ಖಂಡಿಸುವರೆಂಬ ಭಾವ]

ವರದಗೋಪಾಲಾಂಕಿತ ವಿಠಲಸ್ವಾಮಿಯ ವಿಷಯಕವಾದ ಸುದ್ದಿಗೆ ಸಂತೋಷಗೊಳ್ಳುವ ಹರಿಭಕ್ತರೆಂಬ ಚಕೋರ ಪಕ್ಷಿಗಳಿಗೆ (ಅವುಗಳಿಗೆ ಬೆಳದಿಂಗಳೇ ಆಹಾರವೆಂಬ ನಂಬುಗೆ.) ಪರಮಾನಂದವನ್ನುಂಟುಮಾಡುವ ರಾಘವೇಂದ್ರ ಗುರುವೆ ವಂದನೆ.

ವಿ. ವಿ :- ಸತ್ + ವೈಷ್ಣವ - ಒಳ್ಳೆಯ ವಿಷ್ಣುಭಕ್ತ.
ಮಾರುತ ಶ್ರೀ ಮಧ್ವಾಚಾರ್ಯರು ಮಾರುತನ ಮೂರನೆಯ ಅವತಾರವೆಂದು ಮಾಧ್ವರ ನಂಬುಗೆ. ಅವರು ಸ್ಥಾಪಿಸಿದಮತ.
<u>ವರದಗೋಪಾಲವಿಠಲ</u> :- ಈ ಅಂಕಿತ ತಳೆದವರು ಶ್ರೀ ಗೋಪಾಲದಾಸರ ಎರಡನೆಯ ತಮ್ಮ ದಾಸಪ್ಪದಾಸರು ಇವರು ಅಪರೋಕ್ಷಜ್ಞಾನಿಗಳೆಂದು ದಾಸಪೀಳಿಗೆಯಲ್ಲಿ ಪ್ರತೀತಿ.

ರಾಘವೇಂದ್ರಸ್ವಾಮಿಗಳು :- ಮಂತ್ರಾಲಯದಲ್ಲಿ ಸಶರೀರದಿಂದ ವೃಂದಾವನವನ್ನು ಪ್ರವೇಶಿಸಿದ ಮಹಾಮಹಿಮರಾದ ಗುರುಗಳು. ಬೇಡಿದವರಿಗೆ ಬೇಕಾದುದನ್ನು ಕರುಣಿಸುವ ಸಾಮರ್ಥ್ಯವುಳ್ಳ ತಪೋನಿಷ್ಠರಾದ ಕರುಣಿಗಳಿವರೆಂದು ಭಕ್ತರೆಲ್ಲರ ನಂಬುಗೆ. ಇವರು ಸ್ವಪ್ನದಲ್ಲಾಗಲೀ ಇತರ ಮೂಲಕವಾಗಿಯಾಗಲೀ ಭಕ್ತರ ಕೋರಿಕೆಗಳನ್ನು ಸಲ್ಲಿಸುವರೆಂದು ಅನುಭವಿಗಳ ಹೇಳಿಕೆ.

## ಕೃಷ್ಣಾಪುರಮಠದ ವಿದ್ಯಾಧೀಶತೀರ್ಥರ ಮೇಲೆ

೨೩. ರಾಗ-ಶಂಕರಾಭರಣ ತಾಳ-ಚ. ಏಕ

ಪಲ್ಲ :-ವಿದ್ಯಾಧೀಶತೀರ್ಥ-ವಿದ್ಯಾನಿಧಿ ಸಮುದ್ರ-ಮಧ್ವರಾಯರಪಾದ-
ಪದ್ಮಕ್ಕೆ ಭೃಂಗ ||

ಅ. ಪ :- ಒದ್ದು ಕಾಳಿಯ ಕಾಳಿ-ಮರ್ದನ ಪಾದ-ಪದ್ಮವ ಪೂಜಿಸುತ-
ಲಿದ್ಯತಿವರನೆ ||

ಚ. ೧ :-ಕಾಶೀದೇಶದಿ ದ್ವಾ-ದಶವರ್ಷ ವಿದ್ಯಾ-ಭ್ಯಾಸವಿ-ಶೇಷಜ್ಞಾ ಪಡೆದಿ ||
ಶ್ರೀ ಸುಧಾಗ್ರಂಥವ-ಭೂಸುರರಿಗೊರದಿ-ಶ್ರೀಶನ ಸ್ಮರಿಸುತಾ-
ಶೇಷಜ್ಞಾನಪಡದಿ |
ಆ ಸೇತ್ತಿಮಾಲಯ-ದೇಶಗಳ ನಿವಾಸಿಗಳ-ಪೊಗಳಲಿನ್ನೇನು-
ನಾಪೇಳಲಿ ||೧||

೨ -ಮುರಾರಿಪರಿಯಾಯ-ಮೂರೊಂದುಸಾರಿ ಮಾಡಿ-ಸ್ವಾದಿಯ
ಪೊರಟೆ-ಗಿರಿರಾಯ |
ಯಾತ್ರೆಗಾಗಿ ಸೇರಿ-ಗಿರಿಯ ಪರಿವಾರ-ಸಹಿತ ಬೆಂಗಳೂರಲ್ಲಿ-
ಮೂರೊಂದು |
ಈರೈದು ವತ್ಸರದಿ-ಮೂರನೆಯಮಾಸಾಸಿತ ಪಕ್ಷದಿ|
ಮುರಾರಿದಿನದ ರಾತ್ರಿ-ಸೇರಿದ್ಯೋಹರಿಪದ ||೨||

೩ -ಹರಿಭಕ್ತರಕೊಂಡಾಡೆ-ಹರಿಪ್ರೀತಿಯಾಗ್ವದೆಂದು-ಅರಿತು
ಕೊಂಡಾಡಿದೆನೊ | ವರಯತಿರಾಯನೆ |
ನಿರುತದಲ್ಲಿಹರಿ-ಚರಿತೆಗಳತಿಳಿದು-ಸಿರಿವರವಿಜಯಮೋಹನವಿಠಲನ|
ಚರಣದರುಶನವು-ಶರಣಗೆದೊರಕುವ-ತೆರದಿಹರಸುವುದು-
ಕರುಣದಿ ಗುರುವೆ ||೩||

ಸ. ಅ :- ವಿದ್ಯೆಯ ನಿಕ್ಷೇಪದಲ್ಲಿ (ಸಂಗ್ರಹದಲ್ಲಿ) ಸಮುದ್ರಪ್ರಾಯನಾದ, ಮಧ್ವಗುರುಗಳ ಪಾದಕಮಲದಲ್ಲಿ ದುಂಬಿಯಂತೆ ವಿಹರಿಸುವ ವಿದ್ಯಾಧೀಶತೀರ್ಥ ಯತಿಶ್ರೇಷ್ಠರೇ; ಕಾಳಿಯ ಮಡುವನ್ನು ಒದ್ದು (ಮಡುವಿಗೆ ಧುಮುಕಿ) ಕಾಳಿಂಗ ಸರ್ಪವನ್ನು ಮರ್ದಿಸಿದ [ಗರ್ವವನ್ನಡಗಿಸಿದ] ಶ್ರೀಕೃಷ್ಣನ ಪಾದಕಮಲಾ

ರಾಧಕರಾದ ಯತಿಶ್ರೇಷ್ಠರೇ ; ಕಾಶೀಕ್ಷೇತ್ರದಲ್ಲಿ ಹನ್ನೆರಡು ವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿ, ಅತಿಶಯವಾದ ತಿಳಿವಳಿಕೆಯನ್ನು ಹೊಂದಿ, ಶ್ರೀ ಸುಧಾಗ್ರಂಥವನ್ನು ಬ್ರಾಹ್ಮಣಶ್ರೇಷ್ಠರಿಗೆ ವ್ಯಾಖ್ಯಾನಿಸುತ್ತ, ಲಕ್ಷ್ಮೀ ಪತಿಯನ್ನು ಧ್ಯಾನಿಸುತ್ತ, ಆಸೇತು ಹಿಮಾಚಲವಿರುವ ದೇಶದ ಜನರೆಲ್ಲ ನಿಮ್ಮನ್ನು ಸ್ತೋತ್ರ ಮಾಡುತ್ತಿರಲು ನಾನು ಏನೆಂದು ತಾನೆ ವರ್ಣಿಸಲು ತಕ್ಕವನಾದೇನು ? ನಾಲ್ಕಾವರ್ತಿ ಶ್ರೀಕೃಷ್ಣನ ಪರ್ಯಾಯಪೂಜೆಗೈದು, ಸ್ವಾದಿಕ್ಷೇತ್ರದಿಂದ ಹೊರಟು ಗಿರಿಶ್ರೇಷ್ಠವಾದ ಶೇಷಾಚಲ ಯಾತ್ರೆ (ತಿರುಪತಿಯ ಯಾತ್ರೆ)ಗೆ ಹೋಗಿದ್ದು, ಪರಿಜನರೊಂದಿಗೆ ಬೆಂಗಳೂರಿಗೆ ಬಂದುನಿಂತು, ವಿಕ್ರಮನಾಮಸಂವತ್ಸರ ಜ್ಯೇಷ್ಠ ಬಹುಳ ಏಕಾದಶಿ ದಿನದಂದು, ರಾತ್ರೆ ವಿಷ್ಣುಪದವನ್ನೈದಿದ ಮಹಾಮಹಿಮರಾದ ಯತಿಶ್ರೇಷ್ಠರೆ; ಹರಿಭಕ್ತರಾದ ತಮ್ಮನ್ನು ಸ್ತುತಿಸುವುದು ಹರಿಗೆ ಪ್ರಿಯವು ಎಂದು ನಂಬಿ (ನನ್ನ ಬಾಲ ಭಾಷೆಯಿಂದ) ಸ್ತುತಿಸಿದ್ದೇನೆ; ಸದಾ ಹರಿ ಚರಿತ್ರೆಯನ್ನು ತಿಳಿದುಕೊಳ್ಳುತ್ತ, ಲಕ್ಷ್ಮೀಪತಿಯಾದ ವಿಜಯಮೋಹನವಿಠಲಾಂತರ್ಗತ ಸ್ವಾಮಿಯ ಪಾದದರ್ಶನವು ಆಶ್ರಿತನಾದ ನನಗೆ ಪ್ರಾಪ್ತವಾಗುವಂತೆ ಹೇ ಗುರುಗಳಾದ ಶ್ರೀ ವಿದ್ಯಾಧೀಶತೀರ್ಥರೆ ಆಶೀರ್ವದಿಸಿ.

೨. ವಿ :- ಒದ್ದುಕಾಳಿಯ :- ಶ್ರೀಕೃಷ್ಣನು ಚಿಕ್ಕಂದಿನಲ್ಲಿ ಗೋಪ-ಗೋಪಿಯರೊಂದಿಗೆ ಹಸುಗಳನ್ನು ಮೇಯಿಸುತ್ತ ಬೃಂದಾವನದಲ್ಲಿ ತಿರುಗುತ್ತಿದ್ದ ಕಾಲದಲ್ಲಿ ಸಮೀಪದಲ್ಲಿ ಹರಿಯುತ್ತಿದ್ದ ಯಮುನಾ ನದಿಯಲ್ಲಿ ಒಂದೆಡೆ ವಿಶೇಷ ಆಳವಾಗಿದ್ದು ಅಲ್ಲಿ ಕಾಳಿಂಗನೆಂಬ ಘಟಸರ್ಪವು ಆಶ್ರಯಪಡೆದು ತನ್ನ ವಿಷಜ್ವಾಲೆಯಿಂದ ಸುತ್ತುಮುತ್ತಲಿನ ಪ್ರದೇಶದಲ್ಲೆಲ್ಲ ತಿರುಗುವ ಪ್ರಾಣಿಗಳ ಪ್ರಾಣಕ್ಕೆ ಅಪಾಯಕಾರಿಯಾಗಿದ್ದಿತು. ಕೃಷ್ಣನು ಆ ಮಡುವಿಗೆ (ಕಾಳಿಯ ಮಡುವಿಗೆ) ಧುಮ್ಮಿಕ್ಕಿ ಕಾಳಿಮರ್ದನ ಮಾಡಿದನು-ಎಂದರೆ ಅಲ್ಲಿದ್ದ ಕಾಳಿಂಗಸರ್ಪದ ಹೆಡೆತುಳಿದು ನಾಟ್ಯವಾಡುತ್ತ ಆ ಸರ್ಪವನ್ನು ಅಲ್ಲಿಂದ ಹೊರಡಿಸಿ ಆ ಪ್ರಾಂತಕ್ಕೆ ವಿಷಬಾಧೆಯನ್ನು ನಿವಾರಿಸಿದನು.

ಮೂರೊಂದುಸಾರಿ :- ಮೂರು ಮತ್ತು ಒಂದು = ನಾಲ್ಕು ವೇಳೆ (ಸಲ) ಅಷ್ಟಮಠದ ಸನ್ಯಾಸಿಗಳಲ್ಲಿ ಒಮ್ಮೆ ಪರ್ಯಾಯಕ್ಕೆ ಕೂತರೆ ಮತ್ತೆ ೧೪ ವರ್ಷ ಕಾಯ್ದು ಪರಿಯಾಯಕ್ಕೆ ಬರಬೇಕು.

ಮೂರೊಂದು ಈರೈದು = ಮೂರು + ಒಂದು = ಮೂರೊಂದು ೪

ಎರಡು ಐದು = ಈರೈದು ೨ × ೫ = ೧೦

ಒಟ್ಟು ೪ + ೧೦ = ೧೪ನೆಯ ವರುಷ. ೬೦ ವರುಷಗಳಲ್ಲಿ ಮೊದಲಿನಿಂದ ಹದಿನಾಲ್ಕು ವರುಷಗಳು ಎಂದರೆ ವಿಕ್ರಮ ಸಂವತ್ಸರವು.

ಮೂರನೆಯ ಮಾಸ-ಚೈತ್ರಾದಿ ಜ್ಯೇಷ್ಠ ಮಾಸ

ಅಸಿತಪಕ್ಷ – ಬೆಳ್ಳಗಿಲ್ಲದ ಪಕ್ಷ – ಬಹುಳ

ಮುರಾರಿಯ ದಿನ (ಹರಿದಾಸರ)- ಏಕಾದಶಿ.

[ವಿಕ್ರಮ ಸಂವತ್ಸರ ಜ್ಯೇಷ್ಠ ಬಹುಳ ಏಕಾದಶಿ]

# ಪುರಂದರದಾಸರ ಮೇಲೆ

೨೫ ರಾಗ-ಮೋಹನ ತಾಳ-ಮಿ. ಛಾ.

ಪಲ್ಲ :–ಗುರುಪುರಂದರರಾಯರೆ ನಿಮ್ಮ ಚರಣಕಮಲವ ನಂಬಿದೆ ||

ಅ. ಪ :–ಗರುವರಹಿತನ ಮಾಡಿ ಸನ್ನುಸು | ಪೊರೆವ ಭಾರವು ನಿಮ್ಮದೊ ||

ಚ. ೧ :-ಒಂದು ಅರಿಯದ ಮಂದಮತಿ ನಾ-ನಿಂದು ನಿಮ್ಮನು-ಪೊಂದಿದೆ |
ಇಂದಿರೇಶನ-ಪಾದತೋರಿಸಿ-ತಂದೆ ಮಾಡೆಲೊ ಸತ್ಕೃಪೆ ||೧||

೨ –ಪುರಂದರಗಡದೊಳಗೆ ನೀಸು-ನಿರುತಧನವನುಗಳಿಸಿದ್ಯೊ |
ಅರಿತುಮನದಲಿ ಜರಿದು ಭವಗಳ–ತರುಣಿಸಹಿತ-ಪೊರಟೆಯೊ||೨||

೩ –ಅಜಭವಾದಿಗಳರಸನಾದ-ವಿಜಯವಿಠಲನಧ್ಯಾನಿಪ |
ನಿಜಸುಜ್ಞಾನವ ಕೊಡಿಸಬೇಕೆಂದು-ಭಜಿಪೆನೊ ಕೇಳ್‌ಗುರುವರ||೩||

ಸ. ಅ :- ಪುರಂದರಗುರುವರ್ಯರೆ ನಿಮ್ಮ ಪಾದಕಮಲಗಳನ್ನು ನಂಬಿದ್ದೇನೆ. ನನ್ನಲ್ಲಿರುವ ಅಹಂಕಾರವನ್ನು ಹೋಗಲಾಡಿಸಿ ರಕ್ಷಿಸುವ ಹೊಣೆಯು ನಿಮ್ಮದು.

ಏನನ್ನೂ ಅರಿಯದ ಬುದ್ಧಿಶೂನ್ಯನಾದ ನಾನು ನಿಮ್ಮನ್ನು ಆಶ್ರಯಿಸಿದ್ದೇನೆ. ಲಕ್ಷ್ಮೀಪತಿಯ ಚರಣದರ್ಶನ ಮಾಡಿಸಿ ಕೃಪೆಮಾಡಿ ತಂದೆ.

ಪುರಂದರಗಡದಲ್ಲಿ ಸದಾ ಹಣವನ್ನು ಗಳಿಸುತ್ತ ಇದ್ದ ನೀವು ಈ ಲೌಕಿಕ ವ್ಯರ್ಥವೆಂದು ಮನಗಂಡು ಎಲ್ಲವನ್ನೂ ದೂರಮಾಡಿ ಪತ್ನಿಸಹಿತ ಹೊರಟಿರಲ್ಲವೆ.

ಬ್ರಹ್ಮೇಂದ್ರಾದಿಗಳ ಪ್ರಭುವಾದ ವಿಜಯವಿಠಲಸ್ವಾಮಿಯನ್ನು ಸ್ಮರಿಸುವ ನಿಶ್ಚಯ ಜ್ಞಾನವನ್ನು ನನಗೆ ಕರುಣಿಸಿರೆಂದು ಗುರುಶ್ರೇಷ್ಠರೇ (ಪುರಂದರದಾಸರೆ) ನಿಮ್ಮನ್ನು ಹೊಂದುತ್ತೇನೆ.

ವಿ ವಿ :-ಪುರಂದರದಾಸರು ಹರಿದಾಸರಾಗುವ ಮುನ್ನ ಶ್ರೀನಿವಾಸನಾಮಕನೆಂಬ ಹೆಸರಿನಲ್ಲಿ ಪುರಂದರಗಡದಲ್ಲಿ ಚಿನಿವಾರ ವ್ಯಾಪಾರ ಮಾಡುತ್ತ, ನವಕೋಟಿ ನಾರಾಯಣನೆಂದು ಕೀರ್ತಿಪಡೆದಿದ್ದ ಧನಿಕ. ಭಗವಂತನ ಅನುಗ್ರಹದಿಂದ ಅವರ ಪತ್ನಿಯ ಮುಖಾಂತರ ವೈರಾಗ್ಯ ಮೂಡಲು ಸಮಸ್ತ ಸಂಪತ್ತನ್ನೂ ಕೃಷ್ಣಾರ್ಪಣ ಮಾಡಿ ದಾಸರಾಗಿ ಶ್ರೀ ವ್ಯಾಸರಾಯರ ಶಿಷ್ಯರಾದವರು. ಶ್ರುತಿ ಸ್ಮೃತಿ-ಪುರಾಣಾಂತರ್ಗತ ರಹಸ್ಯಗಳನ್ನೆಲ್ಲ ಸುಲಭ ಕನ್ನಡದಲ್ಲಿ ಜನತೆಗೆ ಜ್ಞಾನೋಪಯುಕ್ತವಾಗುವಂತೆ ೪೭೫೦೦೦ ಕೃತಿಗಳಲ್ಲಿ ತುಂಬಿ ಭಾರತದಾದ್ಯಂತ ಸಂಚರಿಸಿ ಪ್ರಚಾರ ಮಾಡಿದ ನಾರದಾಂಶ ಸಂಭೂತರಾದ ಮಹನೀಯರು,

# ಭೃಗುಋಷಿಯು ಅವತಾರರಾದ ವಿಜಯದಾಸರ ಮೇಲೆ

೨೪ ರಾಗ-ಮೋಹನ ತಾಳ-ಮಿ. ಛಾ.

ಪಲ್ಲ :- ವಿಜಯದಾಸರ ಪದವ-ಭಜಿಸಿದವಗನವರತ-ವಿಜಯವಾವುದಕೆ ಸಂ-
ದೇಹವೇಕೆ ।

ಚ. ೧ -ಗಜರಾಜವರದನಿಗೆ–ನಿಜದಾಸನೆಂದೆನಿಸಿ–ದ್ವಿಜಕುಲದಲ್ಲಿ
ಮೆರೆವರ–ಇವರ ॥

ಅ. ಪ :-ಮೊದಲು ಋಷಿಗಳು ಕೂಡಿ–ಸತ್ರಯಾಗವನಾಗ–ನದಿಯತೀರದಿ
ರಚಿಸಲು ॥

ಪದುಮಸಂಭವನಂಕ–ಭವಬಂದು ಮುನಿವೃಂದ–ಹೃದಯ
ಸಂಶಯ ಹೊಂದಲು ।

ವಿಧಿವಿಷ್ಣು ಶಿವರೊಳಗೆ-ಉತ್ತಮರ ತಿಳಿಸಿರೆನೆ-ಮುದಡು
ಭಾವವ ವಹಿಸಲು ।

ಒದಗಿ ಭೃಗುಮುನಿಗಳೇ ಸರ್ವೇಶವೈಕುಂಠ–ಸದನನೆಂದರು
ಹಿದವರು–ಇವರು ॥೧॥

೨–ಆ ದೇವ ಮುನಿ ಪುರಂದರದಾಸರಾಗಿ ಈ ಮೇದಿನೀತಳಕೆ ಬರಲು-
ಸಾಧುಸಮ್ಮತಸಾದ–ಪದಪಂಚಲಕ್ಷಕೆ-ಸಾದವೆನ್ಯೂನವಿರಲು-
ಪಾದವನು ಪೂರ್ತಿಸುವ ಸತ್ಪುತ್ರನೆಂದು ಪರ-ಮಾದರದಿ
ಸೂಚಿಸಿರಲು ।

ಭೂದೇವರಿಂದಾಗ–ಆ ದಾಸರಭಿಲಾಷೆ ಸಾಧಿಸಿದ ಸದಯರವರೂ-
ಇವರು ॥೨॥

೩–ವಿ ಎನಲು ವಿಮಲತೆಯು–ಜ ಎಂದವಗೆ ಜಯವು–ಯ ಎನಲು
ಯಾಗಫಲವು ।

ದಾ ಎನಲು ರಾಜ್ಯಪದ,ಯ ಎನಲು ಯಮಭಟರು–ನೋಯಿಸರು
ಇವನ ಕುಲವ ।

ಈ ಯಾವದಕ್ಷರವ ಓಂಕಾರ ಸಹ ಪಠಿಸೆ ಕಾಯಭವಪಿತನ ಬಲವು।
ಜಾಯಾಸಮೇತಮೋ-ಹನ್ನವಿಠಲನ ಪದ-ತೋಯಜ
ಭ್ರಮರರವರು–ಇವರು ॥೩॥

ಸ. ಅ :- ವಿಜಯದಾಸರ ಪಾದಗಳನ್ನು ಸದಾ ಭಜಿಸುವವರಿಗೆ ಹಿಡಿದ ಕೆಲಸ ಕೈಗೂ
ಡುವುದರಲ್ಲಿ ಸಂಶಯವೇಕೆ ?

ಗಜಶ್ರೇಷ್ಠನಿಗೆ ವರಕೊಟ್ಟು [ಆಪತ್ತನ್ನು ತಪ್ಪಿಸಿ] ಸಲಹಿದ ದೇವನಿ
ದಾಸರೆನಿಸಿಕೊಂಡು ಬ್ರಾಹ್ಮಣ ಕುಲದಲ್ಲಿ ಬೆಳಗುವವರು ಈ ದಾಸರು
(ಇಂತಹ ವಿಜಯದಾಸರನ್ನು ... )
ಹಿಂದೆ ನದಿಯೊಂದರ ದಡದಲ್ಲಿ ಸೂತ್ರಯಾಗವನ್ನಾಚರಿಸಬೇಕೆಂದು ಋಷಿ
ಳೆಲ್ಲ ಸೇರಿರಲು ಬ್ರಹ್ಮದೇವನ ತೊಡೆಯಿಂದ ಹುಟ್ಟಿದ ನಾರದರು ಅಲ್ಲಿ
ಬಂದು ಸಂಶಯಗ್ರಸ್ಥರಾದ ಅವರನ್ನು ಬ್ರಹ್ಮ-ವಿಷ್ಣು-ರುದ್ರರಲ್ಲಿ ಶ್ರೇಷ್ಠರು
ಯಾರು ? ಎಂದು ಪ್ರಶ್ನಿಸಿದರು.

[ವಿಷಯವು ಸ್ಫುರಿಸದೆ] ಅವರು ಜಡರಾಗಿರಲು; ಆಗ ಭೃಗುಮುನಿಗಳ
ವೈಕುಂಠಾಧಿಪತಿಯೆ ಸರ್ವ ಶ್ರೇಷ್ಠನೆಂದು ಹೇಳಿದರು. (ಅಂತಹವರ
ಈ ವಿಜಯದಾಸರು)

ಆ ದೇವಮುನಿಗಳಾದ ನಾರದರು ಈ ಭೂಲೋಕದಲ್ಲಿ ಪುರಂದರದಾಸರಾಗಿ
ಜನ್ಮವೆತ್ತಿ ಸಾಧುಗಳೆಲ್ಲ ಒಪ್ಪುವಂತೆ ಐದುಲಕ್ಷಕ್ಕೆ ಕಾಲುಲಕ್ಷ ಕಡಿಮೆಯಾಗಿ
ಪದಗಳನ್ನು ರಚಿಸಿ ಉಳಿದ ಕಾಲುಭಾಗವನ್ನು ನನ್ನ ಮಗನೇ ಪೂರ್ತಿಗೊಳಿ
ಸುವನೆಂದು ಪ್ರೀತಿಯಿಂದ ನುಡಿದಿರಲು, ಆ ಪುತ್ರನೆ ಬ್ರಾಹ್ಮಣ ಜನ್ಮವೆತ್ತಿ
ಆ ದಾಸರ ವಾಣಿಯನ್ನು ನೆರವೇರಿಸಿದ ದಯಾಸಂಪನ್ನನು ಈ ವಿಜಯ
ದಾಸರು.

'ವಿ' ಎಂದರೆ ಪರಿಶುದ್ಧತೆ 'ಜ' ಎಂದರೆ ಜಯ, 'ಯ' ಎಂದರೆ ಯಾಗಮಾಡಿದ
ಫಲ. 'ರಾ'ಎಂದರೆ ರಾಜ್ಯಾಧಿಪತ್ಯ, 'ಯ' ಎಂದರೆ ಅಂತಹವರ ವಂಶಕ್ಕೆ
ಯಮನ ಭಯವಿಲ್ಲದ ಭರವಸೆ (ಮೃತ್ಯುಭಯವಿಲ್ಲ), ಈ ಅಕ್ಷರಗಳನ್ನೂ
ಓಂಕಾರಪೂರ್ವಕವಾಗಿ (ಓಂ ವಿಜಯರಾಯ) ಎಂದು ಉಚ್ಚರಿಸಲು
ಮನ್ಮಥನ ತಂದೆಯಾದ ಕೃಷ್ಣನ ಬಲವು (ರಕ್ಷಣೆಯು) ಪ್ರಾಪ್ತವಾಗುತ್ತದೆ
ಯಾಗಿ ಪತ್ನೀಸಹಿತನಾದ, ಮೋಹನವಿಠಲನ ಪಾದಪಂಕಜದಲ್ಲಿ ದುಂಬಿಯಂ
ತಿರುವವರು ಈ ವಿಜಯದಾಸರನ್ನು ನೆನೆದರೆ ಆ ಭಕ್ತರಿಗೆ ಸದಾ ಕಾರ್ಯ
ಸಿದ್ಧಿಯು ಎಂಬ ಭಾವವು.

ವಿ. ವಿ :- ಸತ್ರಯಾಗವೆನ್ನುವುದು ಅಖಂಡವಾಗಿ ಹದಿಮೂರು ಇಲ್ಲವೆ ನೂರು ದಿನಗಳು ನಡೆಸುವ
ಯಜ್ಞ.

ಪದುಮಸಂಭವನಂಕಭವ :- ಪದುಮ ಸಂಭವನು ಬ್ರಹ್ಮ. ಆತನ ಅಂಕ-ತೊಡೆಯಲ್ಲಿ
ಭವ-ಜನಿಸಿದವನು-ನಾರದಋಷಿ-ಸ್ವಾಯಂಭುವ ಮನ್ವಂತರದಲ್ಲಿ ಬಂದ ಬ್ರಹ್ಮನ ಹತ್ತು
ಮಂದಿ ಮಾನಸಪುತ್ರರಲ್ಲಿಕಡೆಯವ ನಾರದ... 'ಮರೀಚಿರತ್ರ್ಯಂಗಿರಸಾ। ಪುಲಸ್ತ್ಯಃ
ಪುಲಹಃಕ್ರತುಃ। ಭೃಗುರ್ವಸಿಷ್ಠೋ ದಕ್ಷಶ್ಚ। ದಶಮಸ್ತತ್ರನಾರದಃ॥' ಹೀಗೆ ಈತ
ಬ್ರಹ್ಮಚಾರಿ. [ಭಾಗ-೩-೧೨ : ಮತ್ಸ್ಯ-೩.] ಸಾಮಾನ್ಯವಾಗಿ ಪುರಾಣೇತಿಹಾಸಗಳಲ್ಲಿ

ನಾರದರು ಹಲವು ಮಂದಿ ಇದ್ದರೂ ವರ್ಣಿತನಾಗಿರುವ ದೇವರ್ಷಿಯೇ ಈ ನಾರದ. ಪ್ರಾಯಃ ಆಪತ್ತಿಗೆ ಗುರಿಯಾದವರಿಗೆ ಯುಕ್ತಕಾಲದಲ್ಲಿ ಸಹಕಾರ ನೀಡಿ ಲೋಕೋಪಕಾರ ಮಾಡುವುದೆ ಈತನ ಜನ್ಮವ್ರತವೆನ್ನಬಹುದು. ಈತನನ್ನು ತ್ರಿಲೋಕ ಸಂಚಾರಿ, ಕಲಹಪ್ರಿಯ ಎಂದಲ್ಲ ಹೇಳುವುದುಂಟು.

ಭೃಗುಮುನಿ-: ಈತನೊಬ್ಬ ಬ್ರಹ್ಮರ್ಷಿ. ಬ್ರಹ್ಮನ ಹೃದಯದಿಂದ ಉತ್ಪನ್ನನಾದವನು. ಈತನು ಸ್ವಾಯಂಭುವಮನ್ವಂತರದವನು. ಈತನ ಅಂಗಾಲಿನಲ್ಲಿ ನೇತ್ರವಿದ್ದಿತಂತೆ. ತ್ರಿಮೂರ್ತಿಗಳಲ್ಲಿ ಅಧಿಕರು ಯಾರು ಯಾರೆಂದು ಪರೀಕ್ಷಿಸಲು ಈತ ಹೋಗಿದ್ದಾಗ ಬ್ರಹ್ಮ ರುದ್ರರು ಅಷ್ಟಾಗಿ ಗಮನಿಸದೆ ಲೋಲುಪರಾಗಿರಲು ಬೇಸತ್ತು ಶಪಿಸಿ ವೈಕುಂಠದಲ್ಲಿ ಸಹ ಲಕ್ಷ್ಮಿಯೊಂದಿಗೆ ಇದ್ದ ವಿಷ್ಣುವನ್ನು ಕಂಡು ಕೋಪದಿಂದ ತನ್ನ ಕಾಲಿನಿಂದ ಒದ್ದನಂತೆ. ಸತ್ವಗುಣಪ್ರಧಾನನಾದ ಆ ದೇವನು ತನ್ನನ್ನು ಒದ್ದುದರಿಂದ ತಮ್ಮ ಕಾಲಿಗೆ ಯಾತನೆಯಾಯಿತಲ್ಲ ಎಂದು ಋಷಿಯ ಕಾಲನ್ನು ಒತ್ತುತ್ತ ಅಲ್ಲಿದ್ದ ವಿಶೇಷ ಮಹಾತ್ಮೆಯ ಕಣ್ಣನ್ನು ತೆಗೆದು ಹಾಕಿದನಂತೆ. ವಿಷ್ಣುವೇ ತ್ರಿಮೂರ್ತಿಗಳಲ್ಲಿ ಶ್ರೇಷ್ಠನೆಂದು ಭೃಗುವು ಸಾರಿದನಂತೆ.

ಪುರಂದರದಾಸರ ನಾಲ್ಕನೆಯ ಮಗ ಮಧ್ವಪತಿಯೇ ವಿಜಯದಾಸರಾಗಿ ಮರುಜನ್ಮ ಪಡೆದರೆಂದು ದಾಸಪೀಳಿಗೆಯಲ್ಲಿ ನಂಬುಗೆ.

## ಗೋಪಾಲದಾಸರ ಮೇಲೆ

೨೬ ರಾಗ-ಮೋಹನ ತಾಳ-ಮಿ. ಛಾ.

**ಪಲ್ಲ :–ಗೋಪಾಲದಾಸರಾಯ ನಿನ್ನಯ ಪಾದ ನಾ ಪೊಂದಿದೆನು ನಿಶ್ಚಯ**
**ಅ. ಪ :–ಈ ಪೀಡಿಸುವ ತ್ರೈತಾಪಗಳೋಡಿಸಿ ಕೈಪಿಡಿದೆನ್ನನು**
**ನೀಪಾಲಿಸುವುದು ಜೀಯ ||**

**ಚ. ೧ –ಘೋರವ್ಯಾಧಿಗಳ ನೋಡಿ ವಿಜಯರಾಯ-ಭೂರಿ ಕರುಣಮಾಡಿ ।**
**ತೋರಿದರಿವರೆ ಉದ್ಧಾರಕರೆಂದ ದಿನಾರಭ್ಯತವ ಪಾದವಸೇರಿದೆ**
**ಸಲಹೆಂದು ।**
**ಸೂರಿಜನ ಸಂಪ್ರೀಯ ಸುಗು-ಣೋದ್ಧಾರ ದುರುಳನ ದೋಷ**
**ನಿಚಯವ ।**
**ದೂರಗೈಸೊ ದಯಾಂಬುಧಿ ನಿ-ವಾರಿಸದೆ ಕರಪಿಡಿದು ಬೇಗದಿ ||೧||**

**೨–ಅಪಮೃತ್ಯುವನು ತರಿದೆ ಎನ್ನೊಳಗಿದ್ದ–ಅಪರಾಧಗಳ ಮರೆದೆ ।**
**ಚಪಲಚಿತ್ತ ನಿಗೊಲಿದ್ವಿಪುಲಮತಿಯಿತ್ತು-ನಿಪುಣನೆಂದೆನಿಸಿದೆ**
**ತಪಸ್ವಿಗಳಿಂದಲಿ ।**
**ಕೃಪಣವತ್ಸಲ ನಿನ್ನ ಕರುಣೆಗೆ-ಉಪಮೆಗಾಣೆಸು ಸಂತತವು ಕಾ-**
**ಶ್ಯಪಿಂರೊಳಗೆ ಬುಧರಿಂದ ಜಗದಾ-ಧಿಪನ ಕಿಂಕರನೆನಿಸಿ ಮೆರೆದೆ ||೨||**

೩-ಎನ್ನಪಾಲಿಸಿದಂದದಿ ಸಕಲ ಪ್ರ-ಪನ್ನರ ಸಲಹೊ ಮೋದಿ |
ಅನ್ಯರಿಗೀಪರಿಬಿನ್ನಪಗೈಯೆ ಜ-ಗನ್ನಾಥವಿಠಲನ ಸಂಸ್ತುತಿಸುವಧೀರ
ನಿನ್ನನಂಬಿದ ಜನರಿಗೀಪರಿ–ಬನ್ನವೇ ಭಕ್ತಾನುಕಂಪಿ ಶ–
ರಣ್ಯಬಂದೊದಗೀಸಮಯದಿ ಅ–ಹರ್ನಿಶಿಧ್ಯಾನಿಸುವೆ ನಿನ್ನನು ||೩||

ಸ. ಅ :- ಗೋಪಾಲರಾಯರೆ, ನಿಜವಾಗಿ ನಿಮ್ಮ ಪಾದವನ್ನು ನಾನು ಆಶ್ರಯಿಸಿದೆ. ಪ್ರಭುವೆ ಹಿಂಸಿಸುತ್ತಿರುವ ಈ ನನ್ನ ತ್ರಿತಾಪಗಳನ್ನು ಹೋಗಲಾಡಿಸಿ ಆಶ್ರಯವಿತ್ತು ರಕ್ಷಿಸುವುದು.

ಭಯಂಕರವಾದ ನನ್ನ ರೋಗವನ್ನು ಕಂಡು ಅತ್ಯಂತ ಕೃಪೆಯಿಂದ ವಿಜಯರಾಯರು ನಿನ್ನ ಉದ್ಧಾರಕರು ಅವರು ಎಂದು (ನಿಮ್ಮನ್ನು) ತೋರಿಸಿದ ದಿವಸದಿಂದ ಕಾಪಾಡಿರೆಂದು ನಿಮ್ಮ ಪಾದಗಳನ್ನು ಆಶ್ರಯಿಸಿದ್ದೇನೆ. ವಿದ್ವಾಂಸರುಗಳಿಗೆ ಅತ್ಯಂತ ಪ್ರೀತಿಪಾತ್ರರೆ, ಒಳ್ಳೆಯ ಗುಣವನ್ನು ಎತ್ತಿ ಹಿಡಿದವರೆ, ದಯಾಸಮುದ್ರರೆ ನನ್ನನ್ನು ದುಷ್ಟನೆಂದು ಕಡೆಗಣಿಸದೆ ಕೈ ಹಿಡಿದು ಬೇಗ ನನ್ನ ಅಪರಾಧಗಳನ್ನು (ನ್ಯೂನತೆಗಳನ್ನು) ದೂರಮಾಡಿ. ನನಗೆ ಒದಗಿದ್ದ ದುರ್ಮರಣವನ್ನು ದೂರಮಾಡಿದಿರಿ, ನನ್ನ ಅಪರಾಧಗಳನ್ನು ಮರೆತಿರಿ. ಚಂಚಲ ಮನಸ್ಸಿನ ನನಗೆ ಹೆಚ್ಚಿನ ಬುದ್ಧಿಯನ್ನಿತ್ತು ಒಳ್ಳೆಯ ತಪಸ್ವಿಗಳಿಂದಲೂ ನಾನು ದಕ್ಷನೆಂದೆನಿಸಿದಿರಿ. ಸಂಕುಚಿತಭಾವದವರಲ್ಲೂ ವಾತ್ಸಲ್ಯವುಳ್ಳವರೆ, ಈ ಭೂಮಿಯಲ್ಲಿ ನಿಮ್ಮ ಕೃಪೆಗೆ ಹೋಲುವುದನ್ನು ಕಾಣೆನು. ವಿದ್ವಾಂಸರುಗಳಿಂದಲೂ ನಾನು ಭಗವಂತನ ಸೇವಕನೆಂದು ಪ್ರಕಾಶಗೊಳಿಸಿದಿರಿ.

ನನ್ನನ್ನು ಕಾಪಾಡಿದಂತೆ ಇತರ ಆಶ್ರಿತರನ್ನೂ ಸಂತೋಷದಿಂದ ಸಲಹಿರಿ. ಬೇರೆಯವರಿಗೆ ನಾನು ಹೀಗೆ ಬೇಡೆನು ಜಗನ್ನಾಥವಿಠಲಸ್ವಾಮಿಯನ್ನು ಸ್ತುತಿಸುವ ಧೀರರೆ (ಹೇ ಗೋಪಾಲಗುರುವೆ) ನಿಮ್ಮನ್ನು ನಂಬಿದವರಿಗೆ ಈ ಕಷ್ಟವುಂಟೆ ? ಭಕ್ತರಲ್ಲಿ ಅನುಕಂಪವುಳ್ಳವರೆ, ರಕ್ಷಕರೆ, ಹಗಲೂರಾತ್ರೆ ನಿಮ್ಮನ್ನು ನಾನು ಧ್ಯಾನಿಸುತ್ತೇನೆ. ಈ ವೇಳೆಯಲ್ಲಿ ಬಂದು ಸಹಾಯ ನೀಡಿರಿ.

ವಿ. ವಿ :- ತ್ರೈತಾಪ:-ಆಧ್ಯಾತ್ಮಿಕ, ಆಧಿದೈಹಿಕ, ಆದಿಭೌತಿಕ ಎಂಬವು ೩ ಬಗೆಯ ತಾಪಗಳು. ಜಗನ್ನಾಥದಾಸರು ತಾವು ಕಾಯಿಲೆಬಿದ್ದುದು, ವಿಜಯದಾಸರು ಕರುಣಿಸಿ ಗೋಪಾಲದಾಸರಲ್ಲಿಗೆ ಕಳುಹಿಸಿದುದು; ಗೋಪಾಲದಾಸರು ಗುರುವಾಜ್ಞೆಯಂತೆ ಜಗನ್ನಾಥದಾಸರಿಗೆ ಆಯುಸ್ಸನ್ನು ಧಾರೆ ಎರೆದು ಸ್ವರೂಪೋದ್ಧಾರ ಮಾಡಿದುದು ಮೊದಲಾದ ತಮ್ಮ ಜೀವಿತ ವೃತ್ತವೆಲ್ಲವನ್ನೂ ಈ ಹಾಡಿನಲ್ಲಿ ವಿಶದೀಕರಿಸಿದ್ದಾರೆ.

# ಜಗನ್ನಾಥದಾಸರ ಮೇಲೆ

೨೭ ರಾಗ-ಮಧ್ಯಮಾವತಿ ತಾಳ-ಮಿ. ಛಾ.

ಪಲ್ಲ :–ಜಗನ್ನಾಥದಾಸರಾಯ ಜೀಯ-ಜಗನ್ನಾಥದಾಸರಾಯ ||

ಅ. ಪ :–ಬಗೆ ಬಗೆಯಲಿ ನಿನಗೆ-ಭಗವಂತ ರಂಗ ಒಲಿದ ||

ಚ. ೧ –ಶ್ರುತಿಸಿದ್ಧ ಮಧ್ವಮತವಾರಿಧಿಯನ್ನು-ಮಥಿಸಿ ರಚಿಸಿದರು ಹರಿ–
ಕಥಾಮೃತಸಾರ ತೆಗೆದು–ಕ್ಷಿತಿಸುರರಿಗಿತ್ತೆ ||

೨ –ಇತಿಹಾಸಪುರಾಣಸಮ್ಮತಿಯಿಂದ-ಯತಿಪ್ರಾಸವಿನೋದದಿ–
ಅತಿಚಿತ್ರಪದವ ರಚಿಸಿ-ಮತಿದಾಯಕ ಗುರು ||

೩ –ವಿಜಯಹಯಗ್ರೀವ ಕಂಜಪದವ-ಭಜಿಸುವವಾದಿರಾಜ
ನಿಜಕೋಶವನನುಸರಿಸಿ-ಋಜುಮಾರ್ಗ ತೋರಿ ಮೆರೆವ ||

ಸ. ಅ :–ಜಗನ್ನಾಥದಾಸರಾಯ ಪ್ರಭುವೆ (ವಂದನೆಗಳು.)

ನಾನಾವಿಧದಿಂದ (ನಾನಾ ರೂಪದಲ್ಲಿ) ಮಹಾಮಹಿಮನಾದ ರಂಗನಾಥನು ನಿಮಗೆ ಒಲಿದಿದ್ದಾನೆ.

ವೇದಸಮ್ಮತವಾದ ಮಧ್ವಮತವೆಂಬ ಸಮುದ್ರವನ್ನು ಕಡೆದು ಅದರಿಂದ ಸಾರಭೂತವಾದ ಹರಿಕಥಾಮೃತಸಾರವನ್ನು (ಸಾರಗ್ರಂಥವನ್ನು) ಸಂಗ್ರಹಿಸಿ ಬ್ರಾಹ್ಮಣರಿಗೆ ಕೊಟ್ಟೆ.

ಇತಿಹಾಸ ಪುರಾಣಗಳಿಗೆ ಹೊಂದಿಕೊಂಡ ಯತಿಪ್ರಾಸಗಳಿಂದ ಕೂಡಿಕೊಂಡ ನಾನಾ ಚಿತ್ರತರವಾದ ಪದಗಳಿಂದ ಜೋಡಿಸಿದ ಹಾಡುಗಳನ್ನು ಬುದ್ಧಿಪ್ರಚೋದಕವಾಗುವಂತೆ ನಿರ್ಮಿಸಿಕೊಟ್ಟ ಗುರುವು ತಾವು.

ಜಯವನ್ನು ಕರುಣಿಸುವ ಹಯಗ್ರೀವದೇವರ ಪಾದಕಮಲವನ್ನು ಭಜಿಸುವ ಶ್ರೀ ವಾದಿರಾಜರು ತೋರುವ ಜಾಣ್ಮೆಯ ಜೋಡಣೆಯನ್ನನುಸರಿಸಿ ಪ್ರಾಮಾಣಿಕವಾದ ದಾರಿಯನ್ನು ತೋರಿಸಿ ಬೆಳಗಿದ (ಜಗನ್ನಾಥ ಗುರುವೆ ವಂದನೆ.)

ವಿ. ವಿ :- ಜಗನ್ನಾಥದಾಸರಿಂದ ರಚಿತವಾಗಿರುವ ಹರಿಕಥಾಮೃತಸಾರವೆಂಬ ಗ್ರಂಥವು ವೇದಸಮ್ಮತವಾದ ಮಧ್ವಮತದ ಸಾರವನ್ನು ಪ್ರತಿಪಾದಿಸತಕ್ಕ ಪುರಾಣೇತಿಹಾಸಗಳಿಗೆ ವಿರುದ್ಧವಲ್ಲದ, ಯತಿಪ್ರಾಸಛಂದಾದಿಗಳಿಂದ ಸುರೂಪ ಪಡೆದಿರುವ ಉತ್ಕೃಷ್ಟ ಗ್ರಂಥವೆಂಬ ಅಂಶವು ಈ ರಚನೆಯಲ್ಲಿ ಒತ್ತಿ ಹೇಳಲಾಗಿದೆ.

---

ಸೂಚನೆ: ಜಗನ್ನಾಥದಾಸರು ಹಿಂದಿನ ಜನ್ಮಗಳಲ್ಲಿ ಕೊಂಡಪ್ಪ ಎಂಬ ಹೆಸರಿನಿಂದ ಶ್ರೀ ವಾದಿರಾಜರಲ್ಲಿ ಶಿಷ್ಯರಾಗಿದ್ದು ಹರಿಕಥಾಮೃತಸಾರ ರಚನೆಗೆ ಬೇಕಾದ ಅಂಶಗಳನ್ನೆಲ್ಲ ಆ ಗುರುಗಳಿಂದಲೇ ಅಭ್ಯಾಸ ಮಾಡಿದ್ದರಂತೆ. ಆ ಪ್ರಾಕ್ತನ ಸಂಸ್ಕಾರ ಬಲದಿಂದ ಜಗನ್ನಾಥದಾಸರಾಗಿ ಹರಿಕಥಾಮೃತಸಾರವನ್ನು ರಚಿಸಿದರೆಂದು ದಾಸಪೀಳಿಗೆಯಲ್ಲಿ ಹೇಳಿಕೆಯುಂಟು. ಅದರ ಗುರುತೇ ಪ್ರಾಯಶಃ ಈ ಮೇಲಿನ ಕೃತಿಯಲ್ಲಿ ಮೂರನೆಯ ಚರಣದಲ್ಲಿ ವಿಜಯಹಯಗ್ರೀವ ಕೋಶವನನುಸರಿಸಿ ಋಜುಮಾರ್ಗ ತೋರಿ ಮೆರೆವ ಎಂದು ಹೇಳಿರಬೇಕು.

## ದೇವರಿಗೆ ಫಲ ಸಮರ್ಪಣೆ

೨೮ ರಾಗ-ಮಧ್ಯಮಾವತಿ ತಾಳ-ಮಿ. ಛಾ.

**ಪಲ್ಲ :–ಫಲಾಹಾರಮಾಡು ಪರಮಪುರುಷನೆ ||**

**ಅ. ಪ :–ಲಲನೆಸಹಿತ ನಿನ್ನ-ಕರಕಂಜದಿಂದ ||**

**ಚ. ೧ –ಪಾಲುಸಕ್ಕರೆಬೆಣ್ಣೆ-ತುಪ್ಪಶೀಕರಣೆಯು–ಸಾಲುರಸಾಯನ–ಸವಿಯೊಳನೀರು |**
**ಮೂಲೋಕದೊಡೆಯ ಹಯವದನ ವೆಂಕಟರೇಯ-ನೀಲಮೇಘ ಶ್ಯಾಮ ಕರಕಂಜದಿಂದ ||೧||**

ಸ. ಅ. :–ನಿನ್ನ ಕಮಲಸದೃಶಕೈಗಳಿಂದ ಪತ್ನಿಯೊಡಗೂಡಿ ಸರ್ವಶ್ರೇಷ್ಠನಾದ ಪರಮಾತ್ಮನೆ ಹಣ್ಣುಗಳನ್ನು ಸೇವಿಸು (ಈ ಉಪಾಹಾರವನ್ನು ಸ್ವೀಕರಿಸು) ಮೂರುಲೋಕಕ್ಕೆ ಒಡೆಯನೂ, ಹಯವದನಾಂತರ್ಗತ ವೆಂಕಟಾಚಲ ಪತಿಯೂ, ನೀಲಮೇಘದಂತೆ ಶ್ಯಾಮಲವರ್ಣನೂ ಆದಸ್ವಾಮಿಯೆ, ನಿನ್ನ ಹಸ್ತಕಮಲಗಳಿಂದ ಹಾಲು, ಬೆಣ್ಣೆ, ಸಕ್ಕರೆ, ತುಪ್ಪ,-ಇವನ್ನು ಸೇರಿಸಿ ಸಿದ್ಧಗೊಳಿಸಿರುವ ಸೀಕರಣೆ ಎಂಬ ಖಾದ್ಯ, ಬಾಳೆಯ ಹಣ್ಣಿನಿಂದ ತಯಾರಿಸಿದ ತಿನಸು, ಸಿಹಿಯಾದ ಎಳನೀರು–ಇವೆಲ್ಲವನ್ನೂ ಒಪ್ಪಿಸಿಕೊಂಡು ಆರೋಗಣೆ ಮಾಡು.

ವಿ. ವಿ :- ಫಲ + ಆಹಾರ. ಕರ–ಕಂಜ ತಾವರೆಯಂತಹ ಕೈ .....
ಮೂಲೋಕ– ಸ್ವರ್ಗ, ಮರ್ತ್ಯ ಮತ್ತು ಪಾತಾಳ ಈ ಮೂರು
ಹಯವದನ – ವಾದಿರಾಜರ ಉಪಾಸ್ಯಮೂರ್ತಿಯ ಅಂಕಿತವನ್ನೇ ಅವರು ಬಳಸಿದ್ದಾರೆ.

## || ಮಂಗಳ ||

೨೯ ರಾಗ-ಆರಭಿ. ತಾಳ-ಆದಿ.

**ಪಲ್ಲ :–ಮಂಗಳಂ ಜಯ ಮಂಗಳಂ ||**

**ಚ. ೧ –ನಿಗಮ ತಂದಿತ್ತ ಮತ್ಸ್ಯನಿಗೆ–ನಗವ ಬೆನ್ನಲಿ ಪೊತ್ತ ಕೂರ್ಮನಿಗೆ |**
**ಜಗವನುದ್ಧರಿಸಿದ ವರಾಹಾವತಾರಗೆ–ಮಗುವ ಕಾಯ್ದ ಮುದ್ದು ನರಸಿಂಹಗೆ ||೧||**

**೨–ಭೂಮಿಯದಾನವ ಬೇಡಿದಗೆ–ಮಹಾ ಕ್ಷತ್ರಿಯರ ಗೆಲಿದವಗೆ |**
**ರಾಮಚಂದ್ರನೆಂಬ ಸ್ವಾಮಿಗೆ ಸತ್ಯ–ಭಾಮೆಯರಸ ಗೋಪಾಲಕೃಷ್ಣಗೆ ||೨||**

**೩–ಬತ್ತಲೆ ನಿಂತಿಹಬೌದ್ಧನಿಗೆ–ಉತ್ತಮ ಹಯವೇರಿದ ಕಲ್ಕಿಗೆ |**
**ಹತ್ತವತಾರದಿ-ಭಕ್ತರ ಸಲಹುವ–ಕರ್ತ ಶ್ರೀ ಪುರಂದರವಿಠಲನಿಗೆ ||೩||**

ಸ. ಅ :- ಜಯಮಂಗಳವು–ಸದಾ–ಶುಭಮಂಗಳವು.

ವೇದವನ್ನು ತಂದುಕೊಟ್ಟ ಮತ್ಸ್ಯಾವತಾರಿಗೆ, ಮಂದರಪರ್ವತವನ್ನು ಬೆನ್ನ ಮೇಲೆ ಹೊತ್ತ ಕೂರ್ಮಾವತಾರಿಗೆ, ಭೂಮಿಯನ್ನು (ತನ್ನ ಕೋರೆ ಹಲ್ಲುಗಳ ಮೇಲೆ) ಎತ್ತಿ ಹಿಡಿದ ವರಾಹಾವತಾರಿಗೆ (ಮತ್ತು) ಬಾಲಕನನ್ನು ರಕ್ಷಿಸಿದ ಮುದ್ದು ನರಸಿಂಹದೇವನಿಗೆ.

ಜಯಮಂಗಳವು–ಸದಾ–ಶುಭಮಂಗಳವು.

ಭೂಮಿಯನ್ನು ದಾನ ಕೇಳಿದ ವಾಮನಮೂರ್ತಿಗೆ, (ಅತಿ ಉದ್ಧಟರಾಗಿದ್ದ) ಕ್ಷತ್ರಿಯರನ್ನೆಲ್ಲ ಗೆದ್ದ ಪರಶುರಾಮನಿಗೆ, ರಾಮಚಂದ್ರನೆಂಬ (ರಾವಣನನ್ನು ಕೊಂದ) ಸ್ವಾಮಿಗೆ, ಸತ್ಯಭಾಮೆಯಪತಿ ಗೋಪಾಲಕೃಷ್ಣನಿಗೆ

ಜಯಮಂಗಳವು–ಸದಾ–ಶುಭಮಂಗಳವು.

ನಿರ್ವಾಣದಲ್ಲಿನಿಂತ ಬುದ್ಧನಿಗೆ, (ದುಷ್ಟಕ್ಷತ್ರಿಯರ ಶಿಕ್ಷಣಕ್ಕಾಗಿ) ಉತ್ತಮವಾದ ಕುದುರೆಯನ್ನೇರಿದ ಕಲ್ಕಿಗೆ, ಈ ರೀತಿ ಹತ್ತವತಾರಗಳನ್ನು ತಾಳಿ ತನ್ನ ಭಕ್ತರನ್ನು ಸಲಹಿದ ಶ್ರೀ ಪುರಂದರವಿಠಲಾಂತರ್ಗತನಾಗಿ ಸಮಸ್ತವನ್ನೂ ನೆರವೇರಿಸುವ ಶ್ರೀ ಪರಮಪುರುಷನಿಗೆ.

ಜಯಮಂಗಳವು–ಸದಾ–ಶುಭಮಂಗಳವು.

ವಿ. ವಿ :- ಈ ಮಂಗಳದಲ್ಲಿ ಶ್ರೀ ವಿಷ್ಣುವು ತಾಳಿದ ದಶಾವತಾರಗಳನ್ನೂ ಹೇಳಲಾಗಿದೆ.

ಮತ್ಸ್ಯಾವತಾರ:- (ಮೀನು) ಕೃತಯುಗಕ್ಕೆ ಮುನ್ನ ಮಹಾಪ್ರಳಯ ಕಾಲದಲ್ಲಿ ಸೋಮಕನೆಂಬ ದೈತ್ಯನು ವೇದಗಳನ್ನೆಲ್ಲ ಕದ್ದುಕೊಂಡು ಹೋಗಲು ಶ್ರೀ ವಿಷ್ಣುವು ಮತ್ಸ್ಯಾವತಾರ ತಾಳಿ ಆ ದೈತ್ಯನನ್ನು ಸಂಹರಿಸಿ ವೇದಗಳನ್ನು ಉದ್ಧರಿಸಿದನು.

ಕೂರ್ಮಾವತಾರ:- (ಆಮೆ) ದಾನವರು ಪ್ರಬಲರಾಗಿ ದೇವತೆಗಳನ್ನು ಅತಿಯಾಗಿ ಹಿಂಸಿಸತೊಡಗಿದರು. ಆ ಬಾಧೆ ತಾಳಲಾರದೆ ದೇವತೆಗಳು ವಿಷ್ಣುವನ್ನು ಮರೆಹೊಕ್ಕರು. ವಿಷ್ಣುವು ಅವರಿಗೆ ನೀಡಿದ ಸಲಹೆಯಂತೆ ರಾಕ್ಷಸರೊಂದಿಗೆ ಸೆಣಸಾಟವನ್ನು ನಿಲ್ಲಿಸಿ ಮೈತ್ರಿಯನ್ನು ಬೆಳಸಿ ಅವರನ್ನೂ ಒಪ್ಪಿಸಿ ಅಮೃತಪ್ರಾಪ್ತಿಗಾಗಿ ಕ್ಷೀರವಾರಿಧಿಯನ್ನು ಕಡೆಯಲು ಮಂದರಪರ್ವತವೇ ಕಡೆಗೋಲಾಯಿತು. ಆ ಪರ್ವತವು ನೀರಿನಲ್ಲಿ ಮುಳುಗಲು ವಿಷ್ಣುವನ್ನೇ ಮರೆ ಹೋಗಲು ಕೂರ್ಮವಾಗಿ ಬೆಟ್ಟವನ್ನು ತನ್ನ ಬೆನ್ನಿನ ಮೇಲೆ ಎತ್ತಿ ಹಿಡಿದು ಅಮೃತಪ್ರಾಪ್ತಿಗೆ ಸಹಾಯ ನೀಡಿದನು. ಇದು ನಡೆದುದು ಈಗಿನ ಶ್ವೇತ ವರಾಹ ಕಲ್ಪದ ಚಾಕ್ಷುಷ ಮನ್ವಂತರದಲ್ಲಿ.

ವರಾಹಾವತಾರ :-(ಹಂದಿ) ವೈಕುಂಠದ ದ್ವಾರಪಾಲಕರಾಗಿದ್ದ ಜಯ-ವಿಜಯರಿಗೆ ಸನಕಾದಿ ಋಷಿಗಳಿಂದ ದೊರೆತ ಶಾಪದ ಫಲವಾಗಿ ಪ್ರಥಮತಃ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಎಂಬ ರಾಕ್ಷಸರ ಜನ್ಮವು ಮರ್ತ್ಯಲೋಕದಲ್ಲಿ ಉಂಟಾಯಿತು. ಹಿರಣ್ಯಾಕ್ಷನು

ವಿಷ್ಣುವಿನ ಪತ್ನಿಯಾದ ಭೂದೇವಿಯನ್ನೇ ಎತ್ತಿಕೊಂಡು ಸಮುದ್ರದಲ್ಲಿ ಅಡಗಿಸಿದನು. ಆಗ ವಿಷ್ಣುವು ವರಾಹಾವತಾರವನ್ನೆತ್ತಿ ನೀರನ್ನು ಹೊಕ್ಕು ಅಸುರರನ್ನು ಹಿಡಿದು ಸೀಳಿ ಭೂಮಿಯನ್ನು ಯಥಾಸ್ಥಾನಕ್ಕೆ ಸೇರಿಸಿದನು.

ನಾರಸಿಂಹಾವತಾರ: (ಮುಖಸಿಂಹಾಕೃತಿ ದೇಹ ಮನುಷ್ಯಾಕೃತಿ) ಹಿರಣ್ಯಕಶಿಪುವಿನ ಮಗ ಪ್ರಹ್ಲಾದನು ಪರಮವಿಷ್ಣುಭಕ್ತ, ತಂದೆ ವಿಷ್ಣುದ್ವೇಷಿ. ಮಗನನ್ನು ತನ್ನ ದಾರಿಗೆ ತಿರುಗಿಸಿಕೊಳ್ಳಲಾಗದೆ ಬಹುವಾಗಿ ಹಿಂಸಿಸಿದ. ಕಡೆಗೆ ಸಭಾಸ್ಥಾನದಲ್ಲಿದ್ದ ಕಂಭವೊಂದರಲ್ಲಿ ಸರ್ವವ್ಯಾಪ್ತನಾದ ನಿನ್ನ ದೇವರನ್ನು ತೋರಿಸೆಂದನು. ಮಗನಾದ ಪ್ರಹ್ಲಾದನು ಭಕ್ತಿಯಿಂದ ಕರೆಯಲು ಆ ಕಂಭದಲ್ಲೇ ನರಸಿಂಹನಾಗಿ ಅವತರಿಸಿ ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತನನ್ನು ಉದ್ಧರಿಸಿದನು.

ವಾಮನಾವತಾರ :-(ಕುಳ್ಳಾದ ಆಕಾರ) ಪ್ರಹ್ಲಾದನ ಮಗ ಬಲಿ. ಈತನು ಇಂದ್ರನಿಂದ ಕೊಲ್ಲಲ್ಪಟ್ಟ. ದೈತ್ಯಗುರು ಶುಕ್ರಾಚಾರ್ಯನು ಮೃತಸಂಜೀವಿನಿ ವಿದ್ಯೆಯಿಂದ ಬಲಿಯನ್ನು ಬದುಕಿಸಿದ. ಬಲಿಯು ವಿಶ್ವಜಿತ್ ಎಂಬ ಯಾಗ ಮಾಡಿ ಅಗ್ನಿದೇವನಿಂದ ರಥಾಶ್ವಗಜಗಳನ್ನೂ; ಪಿತಾಮಹನಾದಪ್ರಹ್ಲಾದನಿಂದ ದಿವ್ಯಧನಸ್ಸನ್ನೂ ಅಕ್ಷಯ ತೂಣೀರವನ್ನು ಪಡೆದು ಇಂದ್ರನನ್ನು ಸೋಲಿಸಿ ಸ್ವರ್ಗಾಧಿಪತ್ಯ ಮಾಡುತ್ತ ಭೂಲೋಕದಲ್ಲಿ ನರ್ಮದಾತೀರದಲ್ಲಿ ಅಶ್ವಮೇಧಯಾಗಕ್ಕೆ ತೊಡಗಿದ. ಇಂದ್ರಾದಿಗಳ ಅಭ್ಯುದಯಕ್ಕಾಗಿ ವಿಷ್ಣುವು ಅದಿತಿದೇವಿಯಲ್ಲಿ ವಾಮನನಾಗಿ ಅವತರಿಸಿ ಬ್ರಹ್ಮೋಪದೇಶದ ನಂತರ ಬಲಿಯ ಸಮೀಪಕ್ಕೆ ಬಂದು ತನ್ನ ಮೂರುಹಜ್ಜೆಯಷ್ಟು ಭೂಮಿಯನ್ನು ದಾನವಾಗಿ ಬೇಡಿದ. ಬಲಿ ಆಗಲೆಂದು ಮಾತುಕೊಡಲುವಾಮನನು(ತ್ರಿವಿಕ್ರಮನಾಗಿಬೆಳೆದು)ಒಂದು ಹಜ್ಜೆಯಿಂದ ಭೂಮಿಯನ್ನೂ ಇನ್ನೊಂದರಿಂದ ಅಂತರಿಕ್ಷವನ್ನೂ ಅಳೆದು ಮೂರನೆಯ ಹಜ್ಜೆಗೆ ಬಲಿಯ ತಲೆಯನ್ನೇ ಅಳೆದು ಅವನನ್ನು ಪಾತಾಳಕ್ಕೆ ತಳ್ಳಿದನು ಇದೂ ಇದೇ ವೈವಸ್ವತ ಮನ್ವಂತರದ ೭ನೆಯ ಕೃತಯುಗದಲ್ಲಿ ನಡೆಯಿತಂತೆ.

ರಾಮಾವತಾರ :-(ಇದು ಕೊಡಲಿಯನ್ನು ಹಿಡಿದು ಪರಶುರಾಮನೆನಿಸಿಕೊಂಡ ಅವತಾರ) ಜಮದಗ್ನಿ ಎಂಬುವವರು ಮಹರ್ಷಿಗಳು. ಇವರ ಮಗನೇ ಪರಶುರಾಮ. ತಂದೆಯ ಮಾತಿಗೆ ಬೆಲೆಕೊಡದ ನಾಲ್ವರು ಅಣ್ಣಂದಿರನ್ನೂ, ತಂದೆಗೆ ಬೇಡದವಳಾದ ರೇಣುಕೆಯನ್ನೂ (ತಾಯಿ) ಸಂಹರಿಸಿ ಮತ್ತೆ ತಂದೆಯಿತ್ತ ವರದಿಂದಲೇ ಅವರೆಲ್ಲರನ್ನೂ ಬದುಕಿಸಿಕೊಂಡನು. [ಇದು ಈಗಿನ ವೈವಸ್ವತ ಮನ್ವಂತರದ ೧೯ ನೇ ಕೃತಯುಗದ ವೃತ್ತಾಂತ] ದುಷ್ಟಕ್ಷತ್ರಿಯರ ಸಂಹಾರಕ್ಕಾಗಿ ಕೊಡಲಿ ಹಿಡಿದು ೨೧ ಸಾರಿ ಈ ಭಾರತವನ್ನು ಪ್ರದಕ್ಷಿಣೆ ಮಾಡಿ ದುಷ್ಟರನ್ನೆಲ್ಲ ನೀಗಿದನು. ಕಾರ್ತವೀರ್ಯಾರ್ಜುನನೆಂಬ ಸಹಸ್ರಬಾಹುವಿನ ಬಾಹುಗಳನ್ನೆಲ್ಲ ಕತ್ತರಿಸಿ ಹಾಕಿದನು. ಈಗಿನ ವೈವಸ್ವತ ಮನ್ವಂತರದ ನಂತರ ಬರುವ ಸಾವರ್ಣಿಯ ಮನ್ವಂತರದಲ್ಲಿ ಈತನು ಸಪ್ತರ್ಷಿಗಳಲ್ಲಿ ಒಬ್ಬನಾಗುವನು.

ಶ್ರೀರಾಮಾವತಾರ: (ದಶರಥನ ಮಗನಾಗಿ ದಶರಥರಾಮನಾದ)

ಚತುರ್ವಿಂಶೇಯುಗೇ ರಾಮಃ-ವಸಿಷ್ಠೇನ ಪುರೋಧಸಾ ।
ಸಪ್ತಮೋ ರಾವಣಸ್ಯಾರ್ಥೇ – ಜಜ್ಞೇದಶರಥಾತ್ಮಜಃ ॥ ಮತ್ಸ್ಯ ೪೭-೨೪೫]

ಎಂಬಂತೆ ೨೪ನೆಯ ತ್ರೇತಾಯುಗದಲ್ಲಿ ರಾಮನು ದಶರಥನ ಪುತ್ರನಾಗಿ ರಾವಣನ ಸಂಹಾರಕ್ಕಾಗಿ ಅವತಾರವೆತ್ತಿದ. ರಾವಣ-ಕುಂಭಕರ್ಣರದು ಜಯ-ವಿಜಯರ ಎರಡನೆಯ ಹುಟ್ಟು. ರಾಮನ ಪತ್ನಿ ಸೀತೆಯನ್ನು ರಾವಣನು ಕದ್ದೊಯ್ದು ಲಂಕೆಯಲ್ಲಿ ಸೆರೆ ಇಟ್ಟು ದರಿಂದ ಶ್ರೀರಾಮನು ತಮ್ಮನಾದ ಲಕ್ಷ್ಮಣನೊಂದಿಗೂ, ಸುಗ್ರೀವ, ಆಂಜನೇಯನೇ ಆದಿಯಾದ ವಾನರರೊಂದಿಗೂ ಹೋಗಿ, ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ರಾವಣ ನನ್ನು ಸೈನ್ಯಸಮೇತಕೊಂದು ವಿಭೀಷಣನಿಗೆ ಪಟ್ಟಗಟ್ಟಿ ಅಯೋಧ್ಯೆಗೆ ಹಿಂದಿರುಗಿ ರಾಜ್ಯವಾಳಿ ವೈಕುಂಠಕ್ಕೆ ತೆರಳಿದ ಪೂರ್ಣಾವತಾರವಿದು.

ಕೃಷ್ಣಾವತಾರ:- ಯದುವಂಶದ ವಸುದೇವ-ದೇವಕಿಯರ ಅಷ್ಟಮಪುತ್ರನಾಗಿ ಜನಿಸಿ ಸೋದರಮಾವ ಕಂಸನ ಕುಟಿಲಮಾರ್ಗಕ್ಕೆ ಬಲಿಯಾಗದೆ ಬೆಳೆದು ಮಾವನನ್ನು ಒಕ್ಕಲಿಕ್ಕಿ ಜಯ-ವಿಜಯರ ೩ನೆಯ ಜನ್ಮವಾದ ಶಿಶುಪಾಲ-ದಂತವಕ್ತ್ರರನ್ನು ಸಂಹರಿಸಿ ಪೂರ್ಣಾವತಾರದಿಂದ ಮೆರೆದು ಅದೃಶ್ಯನಾದವನು. ಇದು ಈಗಿನ ವೈವಸ್ವತ ಮನ್ವಂತ ರಕ್ಕೆ ಹಿಂದಿನ ೨೮ನೆಯ ದ್ವಾಪರಾಂತದಲ್ಲಿ ನಡೆಯಿತಂತೆ. ಮೇಘಶ್ಯಾಮನಾಗಿದ್ದ ಈತನು ಕೃಷ್ಣನೆಂದೇ ಖ್ಯಾತನಾದನು.

ಬುದ್ಧಾವತಾರ: ತತಃಕಲೌಸಂಪ್ರವೃತ್ತೇ ಸಮ್ಮೋಹಾಯ ಸುರದ್ವಿಷಾಮ್ ।
ಬುದ್ಧೋನಾಮ್ನಾಜಿನಸುತಃ-ಕೀಕಟೇಷು-ಭವಿಷ್ಯತಿ ॥ [ಭಾಗ ೧ ೩-೨೪] ಎಂಬಂತೆ ಕಲಿಯುಗದ ಆದಿಯಲ್ಲಿ ದೇವದ್ವೇಷಿಗಳ ಬುದ್ಧಿಯನ್ನು ಕಲುಷಿತಗೊಳಿಸಿ ಮೋಹ ಪಡಿಸುವುದಕ್ಕಾಗಿ ಕೀಕಟದೇಶದ ಮಧ್ಯಗಯಾ ಪ್ರದೇಶದಲ್ಲಿ ಜಿನನೆಂಬುವವನ ಮನೆ ಯಲ್ಲಿ ಬುದ್ಧನಾಗಿ ಭಗವಂತನು ಅವತರಿಸಿದನು ಎಂದು ಭಾಗವತದಲ್ಲಿದೆ.

ಶ್ರೀ ಜಯದೇವ ಕವಿಯು ತನ್ನ ಗೀತ ಗೋವಿಂದ ಕಾವ್ಯದಲ್ಲಿ-

ನಿಂದಸಿ ಯಜ್ಞವಿಧೇರಹಹ ಶ್ರುತಿಜಾತಂ।
ಸದಯಹೃದಯದರ್ಶಿತಪಶುಘಾತಂ ।
ಕೇಶವಧೃತ ಬುದ್ಧಶರೀರ ॥ ಹೀಗೆ ಯಜ್ಞಯಾಗಾದಿ ಕರ್ಮಗಳಲ್ಲಿ ನಡೆವ ಪಶುಮಾರಣಾದಿ ಕ್ರಿಯೆಗಳನ್ನು ಒಪ್ಪದೆ ಎದುರಿಸಿ ಕರುಣಾಮೂರ್ತಿಯಾಗಿದ್ದಾನೆ.

ಶ್ರೀ ಮದಾನಂದತೀರ್ಥ ಭಗವತ್ಪಾದರು ತಮ್ಮ ದ್ವಾದಶ ಸ್ತೋತ್ರದಲ್ಲಿ--
"ದೈತ್ಯವಿಮೋಹಕ ನಿತ್ಯಸುಖಾದೆ - ದೇವಸುಬೋಧಕ ಬುದ್ಧ ಸ್ವರೂಪಾ" ಎಂದು ವೇದಮಾರ್ಗಾನುಯಾಯಿಗಳಾದ ದೈತ್ಯರಿಗೆ ಭ್ರಾಂತಿಯನ್ನುಂಟುಮಾಡಿ, ಶಾಶ್ವತವಾದ ಮೋಕ್ಷಸುಖವನ್ನು ಕೊಡಲು ಕಾರಣನಾದ; ಬ್ರಹ್ಮಾದಿ ದೇವತೆಗಳಿಗೆ ಬ್ರಹ್ಮಜ್ಞಾನ ವನ್ನು ಬೋಧಿಸುವ ಬುದ್ಧಾವತಾರಿಯೆ ನಿನ್ನನ್ನು ವಂದಿಸುತ್ತೇನೆ ಎಂದು ಹಾಡಿದ್ದಾರೆ.

ಶ್ರೀ ಜಗನ್ನಾಥದಾಸರು ತಮ್ಮ ತತ್ವಸುವ್ವಾಲಿ ಎಂಬ ಗ್ರಂಥದಲ್ಲಿ-
ಜಿನನೆಂಬ ದನುಜ ಸಜ್ಜನ ಕರ್ಮವನು ಮಾಡೆ-ಜನಿಸಿ ಅವರಲ್ಲಿ ದುರ್ಬುದ್ಧಿ ।

(ದುರ್ಬುದ್ಧಿ ಕವಿಸಿದ) ವಿನುತ ಶ್ರೀ ಬುದ್ಧ ದಯವಾಗೊ [ಪದ್ಯ-೧೮೭] ಹೀಗೆ ಜಿನನೆಂಬ ದಾನವನು ವೇದೋಕ್ತ ಸತ್ಕರ್ಮಾಚರಣೆ ಮಾಡುತ್ತಿರಲು ಅವನ ಹಾಗೂ ಆತನ ಅನುಯಾಯಿಗಳಲ್ಲಿ ಮಿಥ್ಯಾಜ್ಞಾನವು ಆವರಿಸುವಂತೆ ಮಾಡಲು ಅವತಾರವೆತ್ತಿದ (ಬ್ರಹ್ಮಾದಿಗಳಿಂದ ವಂದ್ಯನಾದ) ಬುದ್ಧದೇವನೇ ಕೃಪೆಮಾಡು ಎಂದಿದ್ದಾರೆ.

ಈವರಿವಿಗಿನ ಸನ್ನಿವೇಶಗಳಲ್ಲೆಲ್ಲೂ ಬುದ್ಧನು ಬತ್ತಲೆ ನಿಂತಿರುವ ವಿಷಯವು ಪ್ರಸ್ತಾ
ಸಲ್ಪಟ್ಟಿಲ್ಲ. ಆದರೆ ಪುರಂದರದಾಸರು ಹಾಡಿರುವ ಈ ಮಂಗಳದಲ್ಲಿ ‹ಬತ್ತಲೆ ನಿಂತಿ
ಬೌದ್ಧನಿಗೆ' ಎಂದಿರುವುದರಿಂದ ಆತನು ಬೆತ್ತಲೆ ನಿಲ್ಲಲು ಕಾರಣವಾದ ಹಿಂದಿನಿಂದಲ
ಬಳಕೆಯಲ್ಲಿರುವ ಉಪಾಖ್ಯಾನವೇ ಕಾರಣವಿರಬೇಕು. ಆದರೆ ತ್ರಿಪುರ ದೈತ್ಯ
ಪತ್ನಿಯರ ಪಾತಿವ್ರತ್ಯಕ್ಕೆ ಭಂಗಬಂದಲ್ಲದೆ ಆ ದೈತ್ಯರಿಗೆ ಅಳಿವಾಗದೆಂಬ ವರವೊಂದ
ಅವರಿಗಿದ್ದಿತಂತೆ. ಆದುದರಿಂದ ವಿಷ್ಣುವು ಬುದ್ಧಾವತಾರ ತಾಳಿ ತನ್ನ ಸುಂದರ ರೂ
ನಿಂದ ತ್ರಿಪುರಸ್ತ್ರೀಯರುಗಳ ಮನಸ್ಸು ಮೋಹಗೊಂಡು ಚಂಚಲವಾದುದರಿಂದ ಪಾ
ವ್ರತ್ಯ ಭಂಗವಾಗಿ ದೈತ್ಯರು ಸತ್ತರಂತೆ. ಇರಬಹುದು.

[ಶ್ರೀ ಮಧ್ವಾಚಾರ್ಯರು ತಮ್ಮ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ :-
ಯಸ್ತ್ರೈಪುರಾಣಾಂಪ್ರಥಮೋಽತ್ರ ಜಾತಃ । ಶುದ್ಧೋದನೇತ್ಯೇವಜಿನೇತಿಚೋಕ್ತಃ
ಕ್ಷೇತ್ರೇಗಯಾಖ್ಯೇ ಸ್ಯಶಿಶುಂಪ್ರಜಾತಂ. ಸಂಪ್ರಾಪ್ಯದೂರೇ ತ್ರ ಬಭೂವ ವಿಷ್ಣುಃ
ಇತ್ಯಾದಿ ತ್ರಿಪುರರಲ್ಲಿ ಮುಖ್ಯನಾದ ದೈತ್ಯನು ಶುದ್ಧೋದನನು ಎಂಬ ಹೆಸರಿನಿಂದ
ಭೂಮಿಯಲ್ಲಿ ಜನಿಸಿದನು. ಜಿನನೆಂದರೂ ಅವನೆ. ಗಯಾಕ್ಷೇತ್ರದಲ್ಲಿ (ಗಯೆ
ಎಂಬ ತನ್ನ ಪತ್ನಿಯಲ್ಲಿ) ಇವನಿಗೆ ಪುಂಶಿಶುವು ಜನಿಸಿತು. ವಿಷ್ಣುವು ಆ ಶಿಶುವನ್ನು
ಮರೆ ಮಾಡಿ ತಾನೇ ಶಿಶುರೂಪದಲ್ಲಿ ಅಲ್ಲಿ ಮಲಗಿದನು. ವ್ಯತ್ಯಾಸವನ್ನು ಅರಿಯದ
ಜಿನದಂಪತಿಗಳು ನವಜಾತ ಶಿಶುವಿಗೆ ಜಾತಕರ್ಮಾದಿಗಳನ್ನು ಮಾಡಲು ಉತ್ಸುಕ
ರಾದಾಗ ಆ ಶಿಶುವು ನಕ್ಕಿತಂತೆ. ಆಶ್ಚರ್ಯಚಕಿತರಾಗಿ ಜಿನದಂಪತಿಗಳು ಕಾರಣವನ್ನು
ಕೇಳಲು ಶಿಶುವು ತಾನು ಬುದ್ಧನೆಂದುಸುರಿ ಅವರುಗಳ ನಂಬುಗೆಗಾಗಿ ಶಂಕರನ ಶೂಲಾ
ಧ್ಯಾಯುಧ, ತನ್ನ ಸುದರ್ಶನ ಚಕ್ರಾದಿಗಳನ್ನು ಸ್ವೇಚ್ಛೆಯಿಂದ ಆಕರ್ಷಿಸಿ ಚಕ್ರದ
ನಡುವೆ ಆಯುಧಪಾಣಿಯಾಗಿ ಕುಳಿತು ಬುದ್ಧದರ್ಶನವನ್ನು ಉಪದೇಶಿಸತೊಡಗಲು
ಅವರೆಲ್ಲ ಬಹುಕಾಲ ಅದೇ ಮಾರ್ಗದಲ್ಲಿದ್ದು ಕಾಲಕ್ರಮದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ
ಪಡಿಸಿಕೊಂಡರಂತೆ (ಜೈನರಲ್ಲಿ ದಿಗಂಬರರು, ಶ್ವೇತಾಂಬರರು ಎಂಬ ಪಂಗಡ
ಗಳಿರುವುದು ತಿಳಿದ ಅಂಶವೆ ಆಗಿದೆ.)

ಶ್ರೀ ವಾದಿರಾಜರು:- ‹ಲೊಕಾನ್‌ಘ್ನತಾಂ ಮತಿವಿಮೋಹ ಮತಿಪ್ರಲೋಭವನ್ ।'
ಎಂಬ ದೃಷ್ಟಿಯಿಂದ ಭಗವಂತನು ಪ್ರಥಮತಃ ಬುದ್ಧಾವತಾರಿಯಾದುದನ್ನೂ;
‹ವೇಷಂವಿಧಾಯ ಯದಭಾಷತಔಪಧರ್ಮ್ಯಂ' ಎಂದು ತ್ರಿಪುರ ಸ್ತ್ರೀಯರಿಗೆ ಉಪಪತಿ
ಯರನ್ನು ಸ್ವೀಕರಿಸಬಹುದೆಂದು ಒಪ್ಪಿಸಿದ ಮತ್ತೊಂದು ಬುದ್ಧರೂಪವನ್ನೂ ಹೇಳಿ
ದ್ದಾರೆ. ಅವರ ತಾತ್ಪರ್ಯನಿರ್ಣಯ ಟೀಕಾ (ಭಾವಪ್ರಕಾಶಿಕಾ ...) ದಲ್ಲಿ-
‹ಜಿನಸುತತನಯಾಪ್ಯೇಕವಾರಂಬುದ್ಧಾವತಾರೋಽಸ್ತಿ' ಎಂದೂ; ಔಪಧರ್ಮ್ಯಮಿತಿ
ದ್ವಿತೀಯಸ್ಕಂದವಚನಾತ್ ತ್ರೈಪುರ ಸ್ತ್ರೀಣಾಂ ಔಪಧರ್ಮ್ಯಂ ಉಪಪತಿಗ್ರಾಹ್ಯೇತಿ
ಪ್ರಮೇಯ ಸಂಬಂಧಿ ಧರ್ಮಭಾಷಿತುಮಪಿ ಏಕವಾರಂ ಬುದ್ಧಾವತಾರೋಽಸ್ತೀತಿ
ಜ್ಞೇಯಂ' ಎಂಬುದಾಗಿ ವಿವರಿಸಿರುವುದರಿಂದ ನಮ್ಮ ಕರ್ನಾಟಕದ ಹರಿದಾಸರೆಲ್ಲ
ಭೃಂಗಕುಂತಲೆಯರ ವ್ರತ ಭಂಗ ಪ್ರಕರಣವನ್ನು ಮೇಲಿಂದ ಮೇಲೆ ಉಪಯೋಗಿಸಿ
ದ್ದಾರೆನ್ನಬೇಕಾಗಿದೆ.

ಉ-೧ ಶ್ರೀಪಾದರಾಯರು: ಜೋ ಜೋ ಜೋ ಜೋ ಜೋ ರಂಗಧಾಮ ಚ-೭ ಬುದ್ಧನಾಗಿ
ಪತಿವ್ರತೆಯರನಾಳಿದೆಯಲ್ಲ.

ಶ್ರೀ ವ್ಯಾಸರಾಯರು: ರಂಗಬಾರಬಾಲೆ ಕುರಂಗನಯನೆ-ಚ-೧ ಪರರಹೆಣ್ಣುಗಳನೆಕೂಡಿ.
ಚ-೨ ನಗುತ್ತ ಬತ್ತಲೆಯನಿಂತು ೩ ನಾರೇರ ವ್ರತವಳಿದರೆ.

ಶ್ರೀ ವಾದಿರಾಜರು: ೧. ಲಕ್ಷುಮಿನಾರಾಯಣ ಚ-೧೩ ದಾನವರ ಮೋಹಿಸುವೆನೆಂದನುಮಾನ ವಿಲ್ಲದೆ ನಗ್ನನಾಗಿ ಹೀನಬುದ್ಧಿಯ ತಿಳಿಸಿ ತ್ರಿಪುರವಂ ಹಾನಿಗೈಸಿದ ಬುದ್ಧನೆ.
೨. ನಾರಾಯ್ಣನಾರಾಯ್ಣ .... ಚ-೯ ತ್ರಿಪುರರ ಸತಿಯರ್ಗೆ ಉಪದೇಶ ಮಾಡಿದಿ ತ್ರಿಪುರರೆಲ್ಲರ ಮಡುಹಿದ್ಯೋ
೩. ಆನಂದಮಯಗೆ ಚಿನ್ಮಯಗೆ.... ಚ-೨ ಮಂದಗಮನೆಯರ ಮುಂದೆ ನಿರ್ವಾಣದಿ ನಿಂಥ ಮೂರುತಿಗಾರತಿಯೆತ್ತಿರೆ.

ಪುರಂದರದಾಸರು: ೧. ಏಳಯ್ಯ ಬೆಳಗಾಯಿತು .. ಚ-೩ ಪುರಮೂರಗೆಲಬೇಕು ಅರವಿಯನು ಕಳೆ ಏಳು.
೨. ಬಿಡೆನಿನ್ನಪಾದವ- ಚ-೩ ಕಡುಬತ್ತಲಾಗಿ ಎನ್ನ ಕೈಲಿಕಾಸಿಲ್ಲೆಂದರು ಬಿಡೆ.
೩. ಕೇಶವಮಾಧವ ಗೋವಿಂದ-ಚ-೪ ಪುಂಡುತನದಿಪೋಗಿ ಪುರವನುರುಪಿ ಬಂಡ ದಾಸಯ್ಯ.
೪. ಅಕ್ರೂರಗೊಲಿದ ಚ-೨ ಭೃಂಗಕುಂತಲೆಯರ ವ್ರತವಕೆಡಿಸಿದ.
೫. ನಿಗಮವ ತಂದಿತ್ತ-ಚ-೩ ಬತ್ತಲೆ ನಿಂತಿದ್ದ ಬೌದ್ಧನಿಗೆ
೬. ಅಚ್ಯುತಾನಂತ ... ತ್ರಿಪುರರ ಸತಿಯರ ವ್ರತಕೆ ವಿಘಾತ.

ಕನಕದಾಸರು: ೧. ನಿನ್ನನಾನೇನೆಂದೆನೋ......ಚ-೩ ಚಿತ್ತಜ ಕೋಟಿಲಾವಣ್ಯತೇಜದಿ ಬಂದು ಉತ್ತಮಸ್ತ್ರೀಯರ ವ್ರತವಳಿದು.

ವಿಜಯದಾಸರು: ೧. ರುಕ್ಮಿಣೀಶರಿಗೆ ಸಮರಿಲ್ಲ ಚ ೩ ಕೃಷ್ಣ ಬಿಮ್ಮನೆ ತ್ರಿಪುರ ಸತಿಯರನಪ್ಪಿದೆ.

ಗೋಪಾಲದಾಸರು: (ಸೂಳಾದಿ) ನೀರಿನಲಿನಿಂತು ನಿಡಗುಟ್ಟು ಊರೆಲ್ಲ ಬತ್ತಲೆಯಾಗಿ ನಿಂತವನೆ ಚಾರುಪೀತಾಂಬರ ಉಡುವ ಮಡವೋ

ಜಗನ್ನಾಥದಾಸರು: ಪಾಲಿಸೊ ನರಸಿಂಹ ಚ-೨ ಬಲಿಯಮನೆಗೆ ಪೋಗಿ ಲಲನೇರ ಪತಿವ್ರತವಳಿದ ಹೀಗೆಲ್ಲ ಹಾಡಿದ್ದಾರೆ.

ಕಲ್ಕ್ಯವತಾರ: ಕಲಿಯುಗಾಂತ್ಯದಲ್ಲಿ ಶಂಬಳಾವತಿ ಎಂಬ ಪಟ್ಟಣದಲ್ಲಿನ ವಿಷ್ಣು ಯಶ-ಸುಮತಿ ಎಂಬ ದಂಪತಿಗಳಿಗೆ ಪುತ್ರನಾಗಿ ಭಗವಂತನು ಜನಿಸಿ ಪರಶುರಾಮನಲ್ಲಿ ವಿದ್ಯಾ ವ್ಯಾಸಂಗ ಮಾಡಿ, ಈಶ್ವರನನ್ನು ಮೆಚ್ಚಿಸಿ ಆತನಿಂದ ಅದ್ಭುತವಾದ ಖಡ್ಗ, ಉತ್ತಮ ವಾದ ಕುದುರೆ, ಆಶ್ಚರ್ಯಕರವಾದ ಗಿಳಿಯನ್ನು ಪಡೆದು ಅಪ್ರತಿಹತ ಮಹಿಮ ನಾಗುವನು. ಸಿಂಹಳದ್ವೀಪದ ಅರಸನಮಗಳಾದ ಪದ್ಮಾವತಿಯನ್ನು (ಆ ಗಿಳಿಯ ಸಹಾಯದಿಂದ) ಮದುವೆಯಾಗಿ ತನ್ನ ದೇಶಕ್ಕೆ ಹಿಂದಿರುಗುವನು. ಆಗ ಕಲಿಯ ಮಿತಿ ಮೀರಿದ ದುರ್ವೃತ್ತಿಯನ್ನು ಕಂಡು ಕ್ರುದ್ಧನಾಗಿ ಯುದ್ಧಮಾಡಿ ಆತನನ್ನು ಸಂಹರಿಸಿ ತನ್ನ ಮಹಿಮೆಯನ್ನು ಈ ಲೋಕದಲ್ಲಿ ಪ್ರಕಟಗೊಳಿಸುವನು. [ಭಾರತ ಸ ಭಾ-೫೦. ಭಾಗ ೧೨-೨.]

೩೦ ರಾಗ–ಆರಭಿ. ತಾಳ–ಆದಿ

ಪಲ್ಲ :–ಮಂಗಳಂ ಜಯಮಂಗಳಂ ||

ಚ. ೧ –ಶಕಟದೊಳಾಶಿಶುಪಾಲಾದಿ–ಸಕಲ ಮಹಾರಾಯರು ಕೂಡಿ |
ರುಕುಮನಗೆಲಿದು ರೂಢಿಯಿಂದಲಿ ತಂದ–ರುಕುಮಿಣಿಯಾಳಿದ ಶ್ರೀಕೃಷ್ಣಗೆ ||೧||

೨ –ಕಾಳಗದಲಿ ನರಕಾಸುರನ–ಸೀಳಿಬಿಸಾಡಿ ಕೈಸೆರೆಪಿಡಿದ |
ಸೋಳಸಾಸಿರ ಸುದತಿಯರೆಲ್ಲರ-ಆಳಿದ ವಸುದೇವಾತ್ಮಜಗೆ ||೨||

೩ –ಸರಸದಿ ಸುರದನುಜರು ಕ್ಷೀರ-ಶರಧಿಯ ಮಥಿಸಲು ಸಂಭ್ರಮದಿ |
ಸಿರಿಯು ಜನಿಸಲು ವರಿಸಿದ ನಿತ್ಯ-ವರದಪುರಂದರವಿಠಲನಿಗೆ ||೩||

ಸ. ಅ ೧-ಸ್ವಯಂವರಕ್ಕಾಗಿ ಬಂದಿದ್ದ ಶಿಶುಪಾಲನೆ ಮೊದಲಾದ ಎಲ್ಲ ರಾಯರೂ ರಥಾರೂಢರಾಗಿದ್ದರೂ ರುಕುಮನನ್ನು (ರುಕ್ಮಿಣಿಯ ಅಣ್ಣನನ್ನು) ಮಾತ್ರ ಗೆದ್ದು ಖ್ಯಾತಿಪಡೆದು ರುಕ್ಮಿಣಿಯನ್ನು ಕರೆತಂದು ವರಿಸಿದ ಶ್ರೀಕೃಷ್ಣನಿಗೆ ಜಯಮಂಗಳವು.

೨ -ಯುದ್ಧದಲ್ಲಿ ನರಕಾಸುರನನ್ನು ಸೀಳಿಹಾಕಿ–ಸೆರೆಯಲ್ಲಿಟ್ಟಿದ್ದ ಹದಿನಾರು ಸಾವಿರ ಮಂದಿ ಸ್ತ್ರೀಯರನ್ನೆಲ್ಲ ಕರೆತಂದು ತನ್ನ ರಕ್ಷಣೆಯಲ್ಲಿ ಉಳಿಸಿಕೊಂಡ ವಸುದೇವನಸುತನಾದ ವಾಸುದೇವನಿಗೆ ಜಯಮಂಗಳವು.

೩ -ಸ್ನೇಹದಲ್ಲಿ ದೇವತೆಗಳೂ-ರಾಕ್ಷಸರೂ ಕೂಡಿ ಹಾಲಿನ ಸಮುದ್ರವನ್ನು ಕಡೆಯಲು ಶ್ರೀದೇವಿಯು ಸಡಗರದಿಂದ ಹುಟ್ಟಿಬರಲು ಆಕೆಯನ್ನು ಒಪ್ಪಿ ಮದುವೆಯಾದ ವರದಾಯಕ ಪುರಂದರವಿಠಲಾಂತರ್ಗತ ಸ್ವಾಮಿಗೆ ಶುಭ ಮಂಗಳವು.

ವಿ. ವಿ :- ರುಕ್ಮಿಣೀದೇವಿಗೆ ಸ್ವಯಂವರವೇರ್ಪಟ್ಟಿದ್ದ ಕಾಲದಲ್ಲಿ ವಿದರ್ಭದೇಶಕ್ಕೆ ಶ್ರೀಕೃಷ್ಣನೂ ಹೋಗಿದ್ದು ರುಕ್ಮಿಣಿಯು ಗೌರಿಪೂಜೆಗಾಗಿ ದೇವಸ್ಥಾನಕ್ಕೆ ಹೋಗುತ್ತಿದ್ದಾಗ, ಪೂರ್ವ ಸಂಕೇತದಂತೆ ಆಕೆಯನ್ನು ರಥದಲ್ಲಿ ಕೂರಿಸಿಕೊಂಡು ಇದಿರಾದ ರಾಜರನ್ನೆಲ್ಲ ಹಿಂದು ಹಾಕಿ ಬೆನ್ನಟ್ಟಿ ಬಂದ ರುಕ್ಮನಿಗೆ ಅಪಮಾನ ಮಾಡಿ ಹಿಂದಿರುಗಿಸಿ ದ್ವಾರಕೆಗೆ ಹೋಗಿ ಆಕೆಯನ್ನು ಮದುವೆಯಾದನು.

ನರಕಾಸುರನನ್ನು ಸೀಳಿ ಬಿಸಾಡಿ-ವಿಷ್ಣುವು ವರಾಹಾವತಾರವೆತ್ತಿದ್ದಾಗ ಆತನ ಮೈಯಿಂದ ಬಿದ್ದ ಬೆವರಿನ ಕಣದಿಂದ ಜನಿಸಿದವನು ನರಕಾಸುರನು. ಈತನು ಭೂದೇವಿಗೆ ಮಗನೂ ಆದಂತಾಯಿತಷ್ಟೆ ? ತಾಯಿಯ ಬೇಡಿಕೆಯಂತೆ ನರಕನಿಗೆ ವಿಷ್ಣುವು ವೈಷ್ಣವಾಸ್ತ್ರವನ್ನು ಕೊಟ್ಟನು. ನರಕನು ದುಷ್ಟನಾಗಿ ದೇವಕಂಟಕನಾದ. ದೇವತೆಗಳ ಹಿತಕ್ಕಾಗಿ ಕೃಷ್ಣನು ನರಕನ ರಾಜಧಾನಿಯಾದ ಪ್ರಾಗ್ಜ್ಯೋತಿಷನಗರಕ್ಕೆ ಹೋಗಿ ಮುರಾದಿ ರಾಕ್ಷಸರೊಂದಿಗೆ ನರಕನನ್ನು ಸಂಹರಿಸಿ ಅವನು ಸೆರೆಹಾಕಿ ಇಟ್ಟುಕೊಂಡಿದ್ದ ೧೬೦೦೦ಮಂದಿ ಸ್ತ್ರೀಯರನ್ನೂ

ಬಿಡಿಸಿ ಅವರುಗಳ ಅಪೇಕ್ಷೆಯಂತೆ ಎಲ್ಲರನ್ನೂ ತನ್ನರಾಣಿವಾಸಕ್ಕೆ ಸೇರಿಸಿಕೊಂಡು ರಕ್ಷಣೆಯಿತ್ತ. ಕ್ಷೀರಸಮುದ್ರದಿಂದ ಹುಟ್ಟಿಬಂದ ಶ್ರೀದೇವಿಯನ್ನೂ ಕೃಷ್ಣನೇ ಮದುವೆಯಾದ

೩೧ ರಾಗ-ಆರಭಿ ತಾಳ-ಆದಿ

ಪಲ್ಲ :–**ಮಂಗಳಂ ಜಯಮಂಗಳಂ ||**

ಚ. ೧ :–**ಅಕ್ರೂರಗೊಲಿದ ತ್ರಿವಿಕ್ರಮಗೆ–ನಕ್ರನಗೆಲಿದ ಪರಾಕ್ರಮಿಗೆ |**
**ಶಕ್ರನಗರ್ವಾಪಹಾರ ಮಾಡಿದ-ಶುಕ್ರನ ಶಿಷ್ಯನ ಗೆಲಿದವಗೆ |**

೨ –**ಗಂಗೆಯ ಪಡೆದ ಶ್ರೀರಂಗನಿಗೆ–ರಂಗುಮಾಣಿಕ್ಯದುಂಗುರದವಗೆ |**
**ಭೃಂಗಕುಂತಲೆಯರ ವ್ರತವನ್ನು ಕೆಡಿಸಿದ–ಅಂಗಜನಯ್ಯ ಶುಭಾಂಗನಿಗೆ ||೨||**

೩ –**ಧರೆಯೊಳಧಿಕವೇಂಕಟಾಚಲಗೆ–ಸ್ಥಿರವಾಗಿ ಪುಷ್ಕರಣಿಲಿನೆಲಸಿಹಗೆ |**
**ವರತತ್ತ್ವ ಶ್ರೀ ಪುರಂದರವಿಠಲಗೆ–ವರವೇಂಕಟ ನಮ್ಮ ಶ್ರೀನಿವಾಸಗೆ ||೩||**

ಸ. ಅ ೧- ಅಕ್ರೂರನಿಗೆ ಪ್ರಸನ್ನನಾದ ತ್ರಿವಿಕ್ರಮನಿಗೂ; ನೊಸಳೆಯನ್ನು ಗೆದ್ದ ಬಲಶಾಲಿಗೂ,ಇಂದ್ರನ ಅಹಂಕಾರವನ್ನು ಅಡಗಿಸಿದ್ದ ದೈತ್ಯಗುರು ಶುಕ್ರಾಚಾರ್ಯರ ಶಿಷ್ಯನಾದ ಬಲಿಯನ್ನು ಅಡಗಿಸಿದವನಿಗೂ ಜಯಮಂಗಳವು.

೨ - ಗಂಗೆಯನುಪಡೆದ ಶ್ರೀರಂಗನಿಗೂ, ಬಣ್ಣದ ಮಾಣಿಕ್ಯದ ಉಂಗುರವಿಟ್ಟವನಿಗೂ ದುಂಬಿಯಂತೆ ಮುಂಗುರುಳಿನ ಸ್ತ್ರೀಯರ ಪಾತಿವ್ರತ್ಯವನ್ನು ಕೆಡಿಸಿದ ಮನ್ಮಥನ ತಂದೆಯಾದ ಸುಂದರಶರೀರಿಗೂ ಶುಭಮಂಗಳವು.

೩ - ಭೂಮಿಯಲ್ಲಿ ಪ್ರಖ್ಯಾತವಾಗಿರುವ ವೆಂಕಟಾಚಲಪತಿಗೂ, ಸ್ವಾಮಿ ಪುಷ್ಕರಣಿಯ ಸಮೀಪದಲ್ಲಿನ (ಆವಾಸದಲ್ಲಿ) ಸ್ಥಿರವಾಗಿ ನೆಲಸಿರುವವನೂ, ಪರತತ್ತ್ವಸ್ವರೂಪಿಯೂ, ಶ್ರೀ ಪುರಂದರವಿಠಲಾಂತರ್ಗತನೂ ಆದ ಶ್ರೀ ಶ್ರೀನಿವಾಸದೇವರಿಗೆ ಜಯಮಂಗಳವು.

ವಿ. ವಿ: ಅಕ್ರೂರಗೊಲಿದವ:- ಯದುವಂಶದ ಶ್ವಫಲ್ಕ ಮತ್ತು ಗಾಂದಿನಿ ಎಂಬ ದಂಪತಿಗಳ ಪುತ್ರನಾದ ಅಕ್ರೂರನು ಕಂಸನ ಅಷ್ಟಮಂತ್ರಿಗಳಲ್ಲೊಬ್ಬನಾಗಿದ್ದರೂ ಶ್ರೀಕೃಷ್ಣನ ಪರಮ ಭಕ್ತ. ಕೃಷ್ಣನಿಂದ ತನಗೆ ಮರಣವೆಂಬುದನ್ನರಿತಿದ್ದ ಕಂಸನು ಬಿಲ್ಲುಹಬ್ಬದ ವ್ಯಾಜದಲ್ಲಿ ಗೋಕುಲದಲ್ಲಿದ್ದ ಬಲರಾಮ ಕೃಷ್ಣರನ್ನು ಮಧುರೆಗೆ ಕರೆಸಿಕೊಂಡು ಅವರನ್ನು ನಾಶಗೊಳಿಸಬೇಕೆಂದು ಯೋಚಿಸಿ ಅವರನ್ನು ಕರೆತರಲು ಅಕ್ರೂರನನ್ನೇ ಕಳುಹಿಸಿದನು. ರಾಮಕೃಷ್ಣರನ್ನು ಕರೆದುಕೊಂಡು ಮಥುರೆಗೆ ಹಿಂದಿರುಗುವಾಗ ಕಾಳಿಂದೀ ನದಿಯಲ್ಲಿ ಸ್ನಾನಮಾಡಲು ಅಕ್ರೂರನು ನೀರಿನಲ್ಲಿ ಮುಳುಗಿದಾಗ ಕೃಷ್ಣನ ನಾಭಿಕಮಲ ದ್ವಾರದಿಂದ ಅವನ ಹೊಟ್ಟೆಯನ್ನು ಪ್ರವೇಶಿಸಿ ಚತುರ್ದಶ ಭುವನಗಳನ್ನೂ ಅಲ್ಲಿ ಕಂಡು ಆಶ್ಚರ್ಯದಿಂದ ನೀರಿನಿಂದ ಮೇಲಕ್ಕೆ ಬಂದಾಗ ಅದೇ ರಾಮಕೃಷ್ಣರನ್ನು ಕಂಡರೂ ಕೃಷ್ಣನು ನಾರಾಯಣನ ಅವತಾರವೆನ್ನುವುದನ್ನು ದೃಢಪಡಿಸಿಕೊಂಡು ಅವನ ಅನುಗ್ರಹ ಸಂಪಾದಿಸಿಕೊಂಡು ಮಥುರೆಗೆ ಹಿಂದಿರುಗಿದನು.

ನಕ್ರನಗೆಲಿದ :- ಗಜೇಂದ್ರಮೋಕ್ಷದ ಉಪಾಖ್ಯಾನ. (ಮೊಸಳೆಯನ್ನು ಕೊಂದು ಆನೆಯನ್ನು ಕಾಪಾಡಿದುದು)

ಶುಕ್ರನ ಶಿಷ್ಯನಗೆಲಿದವ :- ಬಲಿಚಕ್ರವರ್ತಿಯಿಂದ ಇಂದ್ರನ ಗರ್ವವೆಲ್ಲ ಅಡಗಿದ್ದಾಗ ವಾಮನನಾಗಿ ಬಲಿಯಲ್ಲಿ ದಾನವನ್ನು ಬೇಡಿ ಆತನನ್ನು ಪಾತಾಳಕ್ಕೆ ತುಳಿದ ಕತೆ.

ಗಂಗೆಯನು ಪಡೆದ ಶ್ರೀರಂಗ :- ಆಕಾಶವನ್ನಳೆಯಲು ತ್ರಿವಿಕ್ರಮನಾದಾಗ ಆತನ ಕಾಲುಂಗುಷ್ಟದಿಂದ ಬ್ರಹ್ಮಾಂಡವು ಒಡೆದು ಅಲ್ಲಿಂದ ಗಂಗೆಯು ಹೊರಬಂದಳು. ಹೀಗೆ ಅವಳು ವಿಷ್ಣುಪಾದೋದ್ಭವೆ.

ಭೃಂಗಕುಂತಲೆಯರ ವ್ರತವನ್ನು ಕೆಡಿಸಿದ :- ಆ ಭೃಂಗಕುಂತಲೆಯರು ತ್ರಿಪುರಾಸುರರ ಪತ್ನಿಯರು. ತಾರನೆಂಬ ರಾಕ್ಷಸ ತ್ರಿಪುರಾಸುರರ ತಂದೆ. ತಾರನು ಷಣ್ಮುಖನಿಂದ ಹತನಾದ. ತಾರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಈ ಮೂವರು ಇವರ ಕಡೆಯವನೇ ಆದ ಮಯನೊಂದಿಗೆ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಮೆಚ್ಚಿಸಿ ಭೂಮಿ, ಆಗಸ ಅದಕ್ಕೂ ಮೇಲೆ ಕ್ರಮವಾಗಿ ಕಬ್ಬಿಣ, ಬೆಳ್ಳಿ, ಚಿನ್ನಗಳಿಂದ ಪುರಗಳನ್ನು ರಚಿಸಿಕೊಂಡು ವಿದ್ಯುನ್ಮಾಲಿ, ಕಮಲಾಕ್ಷ ಮತ್ತು ತಾರಾಕ್ಷ ಇವರುಗಳು ಕ್ರಮವಾಗಿ ಅವುಗಳಲ್ಲಿ ವಾಸಿಸುತ್ತಿದ್ದರು. ಕಾಲಕ್ರಮದಲ್ಲಿ ದುರ್ಬುದ್ಧಿಯಿಂದ ದೇವತೆಗಳಿಗೆ ಕಂಟಕರಾಗಲು ದೇವತೆಗಳೆಲ್ಲರ ಕೋರಿಕೆಯಂತೆ ಶಿವನು ಭೂಮಿಯನ್ನೇ ತೇರು, ವೇದಗಳನ್ನೇ ಕುದುರೆಗಳು, ಬ್ರಹ್ಮನನ್ನೇ ಸಾರಥಿ, ಮಂದರಪರ್ವತವನ್ನೇ ಬಿಲ್ಲು, ಆದಿಶೇಷನನ್ನೇ ಬಿಲ್ಲಿಗೆ ಕಟ್ಟುವ ಹಗ್ಗ, ಸಮುದ್ರವೇ ಬಾಣಗಳ ಸಂಗ್ರಹ ಸ್ಥಾನ, ವಿಷ್ಣುವೇ ಬಾಣ ಹೀಗೆ ಏರ್ಪಡಿಸಿಕೊಂಡು ಪುಷ್ಯನಕ್ಷತ್ರದಲ್ಲಿ ಆ ಮೂರು ಪುರಗಳೂ ಒಂದೇ ರೇಖೆಗೆ ಬಂದಾಗ ಬಾಣವನ್ನು ಪ್ರಯೋಗಿಸಿದ. ಆ ವೇಳೆಗಾಗಲೆ ವಿಷ್ಣುವು ಬೌದ್ಧನಾಗಿ ತ್ರಿಪುರಸ್ತ್ರೀಯರ ಪಾತಿವ್ರತ್ಯಕ್ಕೆ ಭಂಗ ತಂದಿದ್ದನಾದುದರಿಂದ ಪಟ್ಟಣಗಳೊಂದಿಗೆ ಆ ಅಸುರರು ನಿರ್ನಾಮರಾದರು.

[ಭಾರ. ದ್ರೋ. ೨೦೨ ಕರ್ಣ. ೨೭. ಅನು-೨೬೫; ಭಾಗ. ೭-೧೦]

೩೨ ರಾಗ–ಆರಭಿ ತಾಳ–ಮಿ. ಛಾ.

[ರಾತ್ರಿ ಪೂಜಾಕಾಲದಲ್ಲಿ ದೇವರ ಮುಂದೆ ವಾದಿರಾಜರು ಮಾಡುತ್ತಿದ್ದ ಪ್ರಾರ್ಥನೆ]

**ಹಯವದನ ತನ್ನ ಪ್ರಿಯಳಾದ ಲಕ್ಷುಮಿಗೆ–ಜಯವಿತ್ತ**
**ಕ್ಷೀರಾಂಬುಧಿಯಲ್ಲಿ ।**
**ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ–ದಯದಿ ನಮ್ಮೆಲ್ಲರ**
**ಸಲಹಲಿ ॥** [ಶೋಭಾನೆ]

ಸ. ಅ. -ಹಯಮುಖದೇವನು ತನ್ನ ಪತ್ನಿಯಾದ ಲಕ್ಷ್ಮೀದೇವಿಗೆ ಕ್ಷೀರಾಂಬುಧಿಯಲ್ಲಿ ಇರುವಂತೆ ಹೇಳಿ ಜಯವೆಂದ.
ಅಂತಹ ಶ್ರೀಕೃಷ್ಣನು ನಮ್ಮೆಲ್ಲರನ್ನೂ ದಯದಿಂದ ಕಾಪಾಡಲಿ ॥ತಥಾಸ್ತು॥

॥ ಶ್ರೀ ಗುರ್ವಂತರ್ಗತ ಮಧ್ವೇಶಾರ್ಪಣಮಸ್ತು ॥

॥ ಇತಿ ಪೂರ್ವಾಹ್ನಿಕಸ್ಸಮಾಪ್ತಃ ॥

# ಎರಡನೆಯ ಭಾಗ

## ಶ್ರೀ ಹರಿವಾಯುಗಳಲ್ಲಿ ದುಷ್ಟನಿಗ್ರಹ ರೂಪವಾದ ಪ್ರಾರ್ಥನೆ.
## ಇದನ್ನು ಐದು ಆವರ್ತಿ ಹಾಡುವುದು

೩೩ ರಾಗ–ಭೈರವಿ ತಾಳ–ಮಿ, ಛಾ.

ಪಲ್ಲವಿ :- ಲಕ್ಷ್ಮಿನಾರಾಯಣ–ಜಯ–ಲಕ್ಷ್ಮಿನಾರಾಯಣ ।
ಅ. ಪ :- ಲಕ್ಷ್ಮಿನಾರಾಯಣ–ಮಹ–ಲಕ್ಷ್ಮಿನಾರಾಯಣ ॥
ಚ. ೧ - ಕೊಲ್ಲು ಬೇಗ ಕಳ್ಳರ ಶಿರಿ–ನಲ್ಲ ಮಧ್ವವಲ್ಲಭ ।
ಕೊಲ್ಲದಿದ್ದರೆ ನಿಲ್ಲರವರು–ಕಲಿಯುಗದ ಕಳ್ಳರು ॥೧॥
೨. - ಎಲ್ಲಕೂಡಿ ನಿನ್ನಪೂಜೆಗೆ–ಕಲ್ಲುಹಾಕುತಿದ್ದರು ಗಡ ।
ಬಲ್ಲೆನವರ ಹೊಲ್ಲೆಗಾರರ–ಹಲ್ಲಕೀಳದೆ ನಿಲ್ಲರು ॥೨॥
೩. - ಒಳ್ಳೆಮಾತನಾಡಲವರು–ಕೋಲಾಹಲವ ಮಾಡಿ ಬೈವರು ।
ಗೆಲುವಶಕ್ತಿ ಇಲ್ಲ ನಮಗೆ–ಬಲ್ಲೆ ನೀ ಮಧ್ವಗೊಲಿದನೆ ॥೩॥
೪. - ಕಳ್ಳತನವನೊಲ್ಲೆನೆಂಬರು–ಮುಳ್ಳಿನೊನೆಯಂತಿಹರು ।
ಚೆಲುವಹಯವದನನವರ–ಕೊಲ್ಲು ಕೊಲ್ಲು ನಮ್ಮಗೆಲಿಸು ॥೪॥
ಪ. ಲಕ್ಷ್ಮಿನಾರಾಯಣ–ಜಯ–ಲಕ್ಷ್ಮಿನಾರಾಯಣ ।
ಅ. ಲಕ್ಷ್ಮಿನಾರಾಯಣ–ಮಹ–ಲಕ್ಷ್ಮಿನಾರಾಯಣ ॥

ಪ. ಅ :- ಲಕ್ಷ್ಮೀನಾರಾಯಣನೆ–ಜಯವು. ಮಹಾಲಕ್ಷ್ಮೀನಾರಾಯಣನೆ–ಜಯವು.
೧ - ಮಧ್ವರಿಗೆ ಒಡೆಯನಾದ ಲಕ್ಷ್ಮೀಪತಿಯೆ ಕಳ್ಳರನ್ನು ಬೇಗ ನಿವಾರಿಸು. ಕಲಿಯುಗದ ಕಳ್ಳರಾದ ಅವರು ನಿವಾರಿತರಾಗದೆ ಸುಮ್ಮನಾಗರು.
೨ - ಎಲ್ಲಕೂಡಿ ನಿನ್ನ ಅರ್ಚನೆಗೆ ಅಡ್ಡಿಯೊಡ್ಡುತ್ತಿದ್ದಾರಲ್ಲವೆ ? ಕೀಳು ಮಾತಿನ ಅವರು ಅಂಗವಿಕಲರಾದಲ್ಲದೆ ಸುಮ್ಮನಿರರು.
೩ - ಒಳ್ಳೆಯಮಾತಿಗೆ ಅವರು ವಶರಾಗದೆ ಗದ್ದಲವೆಬ್ಬಿಸಿ ದುರ್ಭಾಷೆಗಳನ್ನಾಡುವರು. ಮಧ್ವರಿಗೆ ಒಲಿದ ಪ್ರಭುವೆ ಅವರನ್ನು ಜೈಸುವ ಶಕ್ತಿ ನಮಗಿಲ್ಲವೆಂದು ನೀನು ಬಲ್ಲೆ.
೪ - ಮುಚ್ಚುಮರೆಯನ್ನು ಅವರು ಒಪ್ಪರು–ಮುಳ್ಳಿನಂತೆ ಹಿಂಸಕರಾಗಿರುವರು. ಸುಂದರನಾದ ಹಯವದನಮೂರ್ತಿಯೆ ಅವರನ್ನು ನಿವಾರಿಸಿ ನಮ್ಮನ್ನು ಗೆಲ್ಲಿಸು.

ವಿ. ವಿ : ವೇದಶಾಸ್ತ್ರಪ್ರತಿಪಾದ್ಯ ಪರಬ್ರಹ್ಮನ ಗುಣಗಳನ್ನು ಅಲ್ಲಗಳೆವವರನ್ನು ಕಳ್ಳರೆನ್ನಬಹುದು. ಅವರು ಮಿಥ್ಯಾವಾದಿಗಳು. ದುರ್ವಾದಿಗಳು. ದುರ್ವಾದಿಗಳಿಂದ ದುರ್ಭಾಷೆಯೂ ಅವಮಾನವೂ ಪ್ರಾಪ್ತವಾಗುವುದು ಸಹಜ. ಗುಂಪುಕೂಡಿ ಆ ಜನರು ಶ್ರೌತ-ಸ್ಮಾರ್ತಾದಿ ಕರ್ಮಾಚರಣೆಗೂ ಭಗವಂತನ ಭಕ್ತಿಪೂರ್ವಕವಾದ ಅರ್ಚನೆಗೂ ತಡೆಯನ್ನೊಡ್ಡು

ವುದು ಸ್ವಭಾವ. ಅಂತಹವರಿಗೆ ಯಾವ ಮತದಲ್ಲೂ ನಂಬಿಕೆಯಿರದು. ಆದುದರಿಂದ ದುರ್ಬಲರು ಹರಿ-ವಾಯುಗಳಿಗೆ ತಾನೇ ಶರಣುಹೋಗಬೇಕು. ವಾದಿರಾಜರ ಕಾಲದಲ್ಲಿ ವೇದವಿಧರ್ಮಿಗಳ, ಮ್ಲೇಚ್ಛರ, ಶೈವರ, ಜೈನರ, ಕುಟಿಲಮಂತ್ರ-ತಂತ್ರಜ್ಞರ, ವಿಧರ್ಮಿಗ್ರಳ ಹಾವಳಿ ಅತಿಯಾಗಿದ್ದಿರಬೇಕು. ಹಜ್ಜೆ-ಹಜ್ಜೆಗೂ ಇಂತಹ ನಾಸ್ತಿಕರಿಂದ ತೊಂದರೆ ಉಂಟಾಗುತ್ತಿದ್ದಿರಬೇಕು. ಆದುದರಿಂದ ರಾಜರ ಅನುಯಾಯಿಗಳಾದಿಯಾಗಿ ಹೀಗೆ ಪ್ರಾರ್ಥನೆ ನಡೆಸಿರಬೇಕು.

ಕೊಲ್ಲು = ಅಡ್ಡಿಪಡಿಸು, ಹೊಲ್ಲೆ = ದುರ್ವಾಕ್ಯ ಕೋಲಾಹಲ ಗದ್ದಲ. ಕಲ್ಲುಹಾಕು-ಅಡ್ಡಿಪಡಿಸು.

### ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

## ದ್ವಾದಶಸ್ತೋತ್ರದ ಆರನೆಯ ಅಧ್ಯಾಯ

**ದೇವಕಿನಂದನ ನಂದಕುಮಾರ–ವೃಂದಾವನಾಂಚನ ಗೋಕುಲಚಂದ್ರ ।**
**ಕಂದಫಲಾಶನ ಸುಂದರರೂಪ–ನಂದಿತಗೋಕುಲ ವಂದಿತಪಾದ ॥೧॥**

ಸ. ಅ :- ದೇವಕಿದೇವಿಯ ಮಗನೂ ಅಥವ (ಸೆರೆಯನ್ನು ಬಿಡಿಸಿ) ಆಕೆಗೆ ಸಂತೋಷವನ್ನುಂಟುಮಾಡಿದವನೂ; ನಂದಗೋಪನ (ಪಾಲಿತ) ಪುತ್ರನೂ, ವೃಂದಾವನ ಪ್ರಾಂತದಲ್ಲಿ ಸಂಚರಿಸಿ ಆ ಪ್ರಾಂತಕ್ಕೆಲ್ಲ ವಿಶೇಷ ಮಹಾತ್ಮೆಯನ್ನುಂಟುಮಾಡಿದವನೂ, ಗೋಕುಲ ಪ್ರಾಂತಕ್ಕೆ ಚಂದ್ರನಂತೆ ಆಹ್ಲಾದಕಾರಕನೂ ಅಲ್ಲಿನ ಗಡ್ಡೆ ಮತ್ತು ಹಣ್ಣುಗಳನ್ನು ತಿನ್ನುತ್ತಿದ್ದವನೂ, ಸುಂದರ ಶರೀರಿಯೂ, ಗೋಕುಲವನ್ನೆಲ್ಲ ಸಂತೋಷಪಡಿಸಿ ಅಲ್ಲಿನವರಿಂದ ನಮಸ್ಕಾರವನ್ನು ಪಡೆದ ಪಾದವುಳ್ಳವನೂ ಆದ ಶ್ರೀಕೃಷ್ಣನೆ ವಂದನೆಗಳು.

**ಇಂದ್ರಸುತಾವಕ ನಂದಕಹಸ್ತ–ಚಂದನಚರ್ಚಿತ ಸುಂದರೀನಾಥ ।**
**ಇಂದೀವರೋದರದಳನಯನ–ಮಂದರಧಾರಿ ಗೋವಿಂದ ವಂದೇ ॥೨॥**

ಸ. ಅ :- ಇಂದ್ರನ ಮಗನಾದ ಅರ್ಜುನನನ್ನು ರಕ್ಷಿಸಿದವನೂ, ನಂದಕವೆಂಬ ಕತ್ತಿಯನ್ನು ಹಿಡಿದಿರುವವನೂ, ಶ್ರೀಗಂಧದಿಂದ ಪೂಸಲ್ಪಟ್ಟ ಸುಂದರಾಂಗಿಯರ ನಾಥನೂ, ನೈದಿಲೆಯ ಒಳಭಾಗದಲ್ಲಿರುವ ಎಸಳಿನಂತೆ ಕಣ್ಣುಳ್ಳವನೂ, ಮಂದರಪರ್ವತವನ್ನು (ಕೃಷ್ಣಾವತಾರವಾದುದರಿಂದ ಪ್ರಕೃತ ಗೋವರ್ಧನಪರ್ವತವನ್ನು) ಧರಿಸಿರುವವನೂ, ಆದ ಗೋಪಾಲಮೂರ್ತಿಯನ್ನು ವಂದಿಸುತ್ತೇನೆ.

**ಚಂದ್ರಶತಾನನ ಕುಂದಸುಹಾಸ–ನಂದಿತದೈವತಾಽನಂದ ಸುಪೂರ್ಣ ।**

ಸ. ಅ :- ನೂರುಮಂದಿ ಚಂದ್ರರಂತೆ ಸುಂದರವಾದ ಮುಖದವನೂ, ಮೊಲ್ಲೆಯ ಹೂವಿನಂತೆ ಒಳ್ಳೆಯನಗು, ಸಂತೋಷಪಡಿಸಲ್ಪಟ್ಟ ದೇವತೆಗಳನ್ನುಳ್ಳವನೂ, ಆನಂದ ಪರಿಪೂರ್ಣನೂ ಆದ ಗೋವಿಂದನೆ ವಂದನೆಗಳು.

# ದಶಾವತಾರದ ವರ್ಣನೆ

**ಮತ್ಸ್ಯಕರೂಪ ಲಯೋದವಿಹಾರಿನ್-ವೇದವಿನೇತ್ರ ಚತುರ್ಮುಖ ವಂದ್ಯ ||**

ಸ. ಅ :- ಪ್ರಲಯಜಲದಲ್ಲಿ ವಿಹರಿಸುವವನೆ; ವೇದಗಳಿಗೆ ಪ್ರವರ್ತಕನಾದ ಚತುರ್ಮುಖ ಬ್ರಹ್ಮನಿಂದ ನಮಸ್ಕೃತನೆ, ಮತ್ಸ್ಯರೂಪಧಾರಿಯೆ (ವಂದನೆಗಳು)

**ಕೂರ್ಮಸ್ವರೂಪಕ ಮಂದರಧಾರಿನ್-ಲೋಕವಿಧಾರಕ ದೇವವರೇಣ್ಯ||**

ಸ. ಅ :- ಮಂದರಪರ್ವತವನ್ನು ಧರಿಸಿರುವ ಕೂರ್ಮಾವತಾರಿಯೆ, ಲೋಕವನ್ನು ಧರಿಸಿರುವವನೆ ದೇವಶ್ರೇಷ್ಠನೇ (ವಂದನೆಗಳು).

**ಸೂಕರರೂಪಕ ದಾನವಶತ್ರೋ-ಭೂಮಿವಿಧಾರಕ ಯಜ್ಞವರಾಂಗ ||**

ಸ. ಅ :- ದಾನವನಾದ ಹಿರಣ್ಯಾಕ್ಷನ ಶತ್ರುವಾಗಿ ಸೂಕರ ರೂಪಧರಿಸಿದವನೆ, ದೇವತೆಗಳಿಂದ ಯಜ್ಞ ಮಾಡಲು ಯೋಗ್ಯವಾದ ಶ್ರೇಷ್ಠವಾದ ಶರೀರವುಳ್ಳವನೆ (ವಂದನೆಗಳು)

**ದೇವನೃಸಿಂಹ ಹಿರಣ್ಯಕಶತ್ರೋ-ಸರ್ವಭಯಾಂತಕ ದೈವತಬಂಧೋ ||**

ಸ. ಅ :- ಹಿರಣ್ಯಕಶಿಪುವೆಂಬ ರಾಕ್ಷಸನ ಶತ್ರುವಾದ ನರಸಿಂಹದೇವನೆ, ಸಮಸ್ತ ಭಯಕ್ಕೂ ಯಮಸ್ವರೂಪನಾದ ದೇವತೆಗಳ ಬಂಧುವೆ (ವಂದನೆಗಳು)

**ವಾಮನ ವಾಮನ ಮಾಣವವೇಷ-ದೈತ್ಯವರಾಂತಕ ಕಾರಣರೂಪ ||**

ಸ. ಅ :- ಸುಂದರವಾದ ನಿನ್ನ ದೇಹಕಾಂತಿಯಿಂದ ನೋಡುವವರಿಗೆ ಸುಖವನ್ನುಂಟು ಮಾಡುವ ಬ್ರಹ್ಮಚಾರಿ ರೂಪಧಾರಿಯೆ, ದಾನವಶ್ರೇಷ್ಠನಾದ ಬಲಿಯನ್ನು ತುಳಿಯಲು ಕಾರಣರೂಪನೆ (ವಂದನೆಗಳು).

**ರಾಮಭೃಗೂದ್ವಹ ಸೂರ್ಜಿತದೀಪ್ತೇ-ಕ್ಷತ್ರಕುಲಾಂತಕ ಶಂಭುವರೇಣ್ಯ||**

ಸ. ಅ :- ಭೃಗುವಂಶೋದ್ಧಾರಕನಾದ ರಾಮನೆ, ಅತ್ಯುತ್ಕೃಷ್ಟವಾದ ಕಾಂತಿಯುಳ್ಳವನೆ, ದುಷ್ಟಕ್ಷತ್ರಿಯರ ಕುಲವನ್ನು ನಾಶಮಾಡಿದವನೆ-ರುದ್ರನಿಂದಸ್ತುತನೆ, ಪರಶುರಾಮನೆ (ವಂದನೆಗಳು)

**ರಾಘವ ರಾಘವ ರಾಕ್ಷಸಶತ್ರೋ-ಮಾರುತಿವಲ್ಲಭ ಜಾನಕೀಕಾನ್ತ ||**

ಸ. ಅ :- ರಘುಕುಲೋದ್ಭವನಾದ ರಾಘವನೆ, ರಾವಣಾದಿ ರಾಕ್ಷಸರ ಶತ್ರುವೆ, ಸೀತಾಪತಿಯೆ, ಆಂಜನೇಯನ ಪ್ರಭುವೆ, ಹೇ ರಾಮ (ವಂದನೆಗಳು)

**ದೇವಕಿನಂದನ ಸುಂದರರೂಪ-ರುಕ್ಮಿಣಿವಲ್ಲಭ ಪಾಂಡವಬಂಧೋ |**

ಸ. ಅ. :- ದೇವಕಿಯ ಮಗನೆ, ಸುಂದರರೂಪನೆ, ರುಕ್ಮಿಣೀಪತಿಯೆ, ಪಾಂಡವರಿಗೆ ಬಂಧುವೆ ಹೇ ಕೃಷ್ಣಾವತಾರಿಯೆ (ವಂದನೆಗಳು)

**ದೈತ್ಯವಿಮೋಹಕ ನಿತ್ಯಸುಖಾದೇ-ದೇವಸುಬೋಧಕ ಬುದ್ಧಸ್ವರೂಪ ||**

ಸ. ಅ :- ದೈತ್ಯರನ್ನು ಮೋಹಗೊಳಿಸಿದವನೆ, ಮೋಕ್ಷಸುಖಕ್ಕೆ ಕಾರಣನೆ, ದೇವತೆಗಳಿಗೂ ನಿತ್ಯ ಜ್ಞಾನಬೋಧಕನೆ, ಬುದ್ಧಾವತಾರಿಯೆ (ವಂದನೆಗಳು)

**ದುಷ್ಟಕುಲಾಂತಕ ಕಲ್ಕಿಸ್ವರೂಪ–ಧರ್ಮವಿವರ್ಧನ ಮೂಲಯುಗಾದೆ।**

ಸ. ಅ :- ದುಷ್ಟರ ಸಮೂಹಕ್ಕೆ ಯಮಸ್ವರೂಪನೆ, ಕಲ್ಕ್ಯವತಾರಿಯೆ, ಧರ್ಮವನ್ನು ಅಭಿವೃದ್ಧಿಗೊಳಿಸುವವನೆ, ಮೊದಲನೆಯದಾದ ಕೃತಯುಗಕ್ಕೆ ಮೂಲ ರೂಪನೆ (ವಂದನೆಗಳು)

**ನಾರಾಯಣಾಮಲಕಾರಣಮೂರ್ತೇ-ಪೂರ್ಣಗುಣಾರ್ಣವ ನಿತ್ಯಸುಬೋಧ।**

ಸ. ಅ :- ಪರಿಶುದ್ಧವಾದ ಕಾರಣಗಳಿಗೆ ಮೂಲಮೂರ್ತಿಯೆ, ನಾರಾಯಣನೆ, ಪರಿಪೂರ್ಣ ಗುಣಸಿಂಧುವೆ, ಸದಾಜ್ಞಾನರೂಪಿಯಾದ ನಿನಗೆ ವಂದನೆಗಳು.

**ಆನಂದತೀರ್ಥ ಮುನೀಂದ್ರಕೃತಾ–ಹರಿಗಾಥಾ ಪಾಪಹರಾ ಶುಭಾ ನಿತ್ಯ ಸುಖಾರ್ಥಾ ||**

ಸ. ಅ :- ಆನಂದತೀರ್ಥ ಮುನಿಶ್ರೇಷ್ಠರಿಂದ ನಿರ್ಮಿತವಾದ ಈ ಹರಿಸ್ತುತಿಯು ಪಾಪ ವನ್ನು ಹೋಗಲಾಡಿಸುವುದು, ಶುಭದಾಯಕವು ಮೋಕ್ಷಸುಖವನ್ನು ಕರುಣಿಸುವುದು.

ಪಲ್ಲವಿ :-**ದೇವಕಿನಂದನ ನಂದಕುಮಾರ-ವೃಂದಾವನಾಂಜನ ಗೋಕುಲಚಂದ್ರ।**
**ಕಂದಫಲಾಶನ ಸುಂದರರೂಪ–ನಂದಿತಗೋಕುಲ ವಂದಿತಪಾದ ||**

೩೪ ರಾಗ–ಪಂತುವರಾಳಿ ತಾಳ–ಆದಿ

ಪಲ್ಲವಿ :- **ತಟಿತ್‌ಕೋಟಿನಿಭಕಾಯ ಜಗನ್ನಾಥವಿಠಲಯ್ಯ ವಿಠಲಯ್ಯ ||**

ಚ. ೧ :- **ಭಜಿಸುವೆ ನಿನ್ನನು–ಅಜಭವಸುರನುತ ।**
**ಭಜಕಾಮರತರು–ಕುಜನಕುಠಾರ ||**

೨ - **ನೀಕರುಣಿಸದೆ ನಿ–ರಾಕರಿಸಲು ಸಲೆ (ಎನ್ನ)**
**ಸಾಕುವರಾರು ದ–ಯಾಪರಮೂರುತಿ ||**

೩ - **ಶರಣಾಗತರನು–ಪೊರೆವೆನೆಂಬತವ-**
**ಬಿರುದುಕಾಯೊ ಕರಿ-ವರದ ಜಗನ್ನಾಥ ||**

ಸ. ಅ :- ಕೋಟಿಮಿಂಚುಗಳ ಕಾಂತಿಗೆ ಸಮವಾದ (ಹೊಳಪಿನ) ಶರೀರಿಯಾದ ಜಗನ್ನಾಥ ವಿಠಲಸ್ವಾಮಿಯೇ (ನಮಸ್ಕರಿಸುತ್ತೇನೆ)

ಚ ೧ - ಬ್ರಹ್ಮ–ರುದ್ರಾದಿ ದೇವತೆಗಳಿಂದ ಸ್ತುತಿಸಲ್ಪಟ್ಟವನಾದ, ಭಜಿಸುವವರಿಗೆ ಸ್ವರ್ಗವೃಕ್ಷವಾದ ಪಾರಿಜಾತದಂತೆ ಕೇಳಿದುದೆಲ್ಲವನ್ನೂ ಕೊಡುವವನಾದ, ದುಷ್ಟರಿಗೆ ಕೊಡಲಿಯಂತಿರುವವ (ಸಂಹಾರಕ) ನಾದ ನಿನ್ನನ್ನು (ಹೇ ಜಗನ್ನಾಥಸ್ವಾಮಿಯೆ) ಸೇವಿಸುತ್ತೇನೆ.

೨ - ದಯಾಪೂರ್ಣಮೂರ್ತಿಯೇ ನೀನು ಕೃಪೆದೋರದೆ ಅಲಕ್ಷ್ಯಮಾಡಿದಲ್ಲಿ ನನ್ನನ್ನು ರಕ್ಷಿಸುವವರು ಮತ್ತಾರಿದ್ದಾರೆ ?

೩ - ಆನೆಗೆ ವರವಿತ್ತ ಜಗನ್ನಾಥದೇವನೆ ನಿನ್ನ ರಕ್ಷಣೆಗೆ ಬಂದವರನ್ನು ಕಾಪಾಡುವೆ ಎಂಬ ಬಿರುದು ನಿನ್ನದು. ನನ್ನನ್ನು ಕಾಪಾಡು.

ವಿ. ವಿ: ಕುಜನ ಕುತ್ಸಿತರಾದ (ದುಷ್ಟಸ್ವಭಾವದ) ಜನರು. ತಟಿತ್ = ಮಿಂಚು. ಕುಠಾರ — ಕೊಡಲಿ.

೩೫ ರಾಗ–ಕಲ್ಯಾಣಿ ತಾಳ–ಆದಿ

**ಪಲ್ಲವಿ :- ದಯವಾಗೊ–ದಯವಾಗೊ ।**

**ಅ. :- ಹಯಮುಖ ಭಯಕೃದ್ಭಯನಾಶನ ಹರಿ ॥**

**ಚ. ೧ :- ಖರಮುರನರಕಾದ್ಯರ ಸಂಹರಿಸಿದ ।**
**ಪರಮಪುರುಷ ಗಹ್ವರ ಭವಹರನೆ ॥೧॥**

**೨ - ದ್ರೌಪದಿನೊರೆಕೇ–ಳಾಪದ್ಬಾಂಧವ ।**
**ನೀಪೊರೆದಂತೆ ರ-ಮಾಪತಿ ನಿರುತ ॥೨॥**

**೩ - ಗೋಭೂಸುರರಿಗೆ–ಭೂಭುಜರಭಯಪ ।**
**ರಾಭವಗೈವುದು-ಶ್ರೀ ಭೂರಮಣನೆ ॥೩॥**

**೪ - ಅಪ್ರಮೇಯ ನೀ-ಕ್ಷಿಪ್ರದಿ ಒಲಿದು ಜ-**
**ಯಪ್ರದನಾಗೊ-ಸುಪ್ರದವರದ ॥೪॥**

**೫ - ಶತ್ರುತಾಪಕ ಜಗತ್ರಯವ್ಯಾಪ್ತ ಪ-**
**ವಿತ್ರಪಾಣಿ ಸ-ರ್ವತ್ರದಿ ಎಮಗೆ ॥೫॥**

**೬ - ಎಷ್ಟೆಂದ್ಹೇಳಲಿ-ದುಷ್ಟಜನರು ಈ-**
**ಕಷ್ಟಪಡಿಪ ಬಗೆ ಜಿಷ್ಣುಸಾರಥಿ ॥೬॥**

**೭ - ಏತಕೆ ನಮ್ಮನು-ಭೀತಿಗೊಳಿಪೆ ಪುರು-**
**ಹೂತವಿಸುತ ಜಗನ್ನಾಥವಿಠಲ ॥೭॥**

ಸ. ಅ :- ಹೆದರಿಕೆಯನ್ನು ಹುಟ್ಟಿಸಿ ಅದನ್ನು ನಿವಾರಿಸುವ, ಕುದುರೆಯ ಮುಖದ ಹರಿಯೆ ದಯಾಪೂರ್ಣನಾಗು, ದಯಾಪೂರ್ಣನಾಗು.

ಚ ೧ - ಖರ, ಮುರ, ನರಕನೇ ಮೊದಲಾದವರನ್ನು ಸಂಹಾರ ಮಾಡಿದ; ಸರ್ವಶ್ರೇಷ್ಠನೂ ಇಹ ಸಾಂಸಾರಿಕ ಕ್ಲೇಶಭಯ ನಿವಾರಕನೂ ಆದ ದೇವನೆ ದಯಾಪೂರ್ಣನಾಗು.

೨ - ದ್ರೌಪದಿಯ ಗೋಳಾಟವನ್ನು ಕೇಳಿ, ಕಷ್ಟಕಾಲದಲ್ಲಿ ನಂಟನಾಗಿ ಬಂದು ರಕ್ಷಿಸಿದಂತೆ ರಮಾಪತಿಯಾದ ದೇವನೇ ಸದಾ (ನಮ್ಮಲ್ಲಿ) ದಯಾಪೂರ್ಣನಾಗು.

೩ - ಶ್ರೀದೇವಿ ಹಾಗೂ ಭೂದೇವಿಯರ ಪತಿಯೆ ! ಗೋಬ್ರಾಹ್ಮಣರುಗಳಿಗೆ (ದುಷ್ಟ), ರಾಜರುಗಳಿಂದ ಉಂಟಾಗುವ ಹೆದರಿಕೆಯನ್ನು ಅಪಜಯಗೊಳಿಸು (ತಪ್ಪಿಸು).

೪ - ಒಳ್ಳೆಯದನ್ನು ಅನುಗ್ರಹಿಸುವ, ವರವನ್ನು ಕೊಡುವ, ಊಹೆಗೆ (ಅಳತೆಗೆ) ನಿಲುಕದ ಮಹಿಮೆಯ ದೇವನೆ, ನೀನು ಬೇಗ ಪ್ರಸನ್ನನಾಗಿ ಜಯವನ್ನು ಕರುಣಿಸು.

೫ - ಶತ್ರುಗಳಿಗೆ ಸಂಕಟವನ್ನು ಉಂಟುಮಾಡುವ, ಮೂರು ಲೋಕಗಳಲ್ಲೂ ವ್ಯಾಪ್ತನಾಗಿರುವ ಪವಿತ್ರವಾದ ಕೈಗಳ ಸ್ವಾಮಿಯೆ ನಮಗೆ ಎಲ್ಲೆಲ್ಲೂ ದಯಾಪೂರ್ಣನಾಗಿರು.

೬ - ಅರ್ಜುನನಿಗೆ ಬಂಡಿಯ ಬೋವನಾದ ಸ್ವಾಮಿಯೆ, ಕೆಟ್ಟವರು ಕೊಡುತ್ತಿರುವ ಕಷ್ಟಗಳನ್ನು ಎಷ್ಟೆಂಬುದಾಗಿ ವಿವರಿಸಲಿ ?

೭ - ಇಂದ್ರನಿಂದ ಸ್ತುತನಾದ ಜಗನ್ನಾಥವಿಠಲಾಂತರ್ಗತ ಉಪೇಂದ್ರನೇ, ನಮ್ಮನ್ನು ಏಕೆ ಇಷ್ಟೊಂದು ಭಯಗೊಳಿಸುವೆ ? ಕೃಪಾಪೂರ್ಣನಾಗು.

ವಿ. ವಿ :- ಖರ :- ಇವನೊಬ್ಬ ರಾಕ್ಷಸ, ವಿಶ್ರವಸನೆಂಬ ಋಷಿಗೆ ರಾಕಾ ಎಂಬ ರಕ್ಕಸಿಯಲ್ಲಿ ಜನಿಸಿದವ. ಶೂರ್ಪಣಖೆ, ದೂಷಣ ಇವರು ಈತನ ಒಡಹುಟ್ಟಿದವರು. ಇವರೆಲ್ಲ ರಾವಣನ ಬಲತಾಯಿಯ ಮಕ್ಕಳು. [ಭಾರತ-ವನ-೨೭೬]. ರಾವಣನು ಖರನಿಗೆ ೧೪೦೦೦ ರಾಕ್ಷಸಸೈನ್ಯವನ್ನು ಕೊಟ್ಟು ದಂಡಕಾರಣ್ಯಕ್ಕೆ ಒಡೆಯನನ್ನಾಗಿ ಮಾಡಿ ದೂಷಣನನ್ನೂ ಶೂರ್ಪಣಖೆಯನ್ನೂ ಈತನ ಪೋಷಣೆಗೆ ಒಳಪಡಿಸಿದ್ದನು. [ರಾ. ಉ. ೩೨-೨೪] ಶ್ರೀರಾಮನು ಪಂಚವಟಿಯಲ್ಲಿದ್ದಾಗ ಶೂರ್ಪಣಖೆಯು ರಾಮನನ್ನು ಮೋಹಿಸಿ ಲಕ್ಷ್ಮಣನಿಂದ ಕಿವಿ-ಮೂಗುಗಳನ್ನು ಕೊಯ್ಯಿಸಿಕೊಳ್ಳಲು ಖರನು ರಾಮನನ್ನು ಇದಿರಿಸಿ ತನ್ನ ಸೈನ್ಯ ಮತ್ತು ತಮ್ಮನೊಂದಿಗೆ ಅಸುವನ್ನು ನೀಗಿದನು. [ರಾ. ಅ. ೧೯-೨೦]

ಮುರ :- ನರಕಾಸುರನ ಪರಿವಾರದ ಒಬ್ಬ ರಾಕ್ಷಸ. ಇವನು ನರಕನ ರಾಜಧಾನಿ ಪ್ರಾಗ್ಜ್ಯೋತಿಷನಗರದ ರಕ್ಷಣೆಗಾಗಿ ಅತ್ಯಂತ ಬಲವಾದ ೧೦೦೦೦ ಪಾಶಗಳನ್ನು ಬಂಧಿಸಿ ತಾನು ಸಮುದ್ರದ ಒಳಗೆ ಮಲಗಿದ್ದ. ಶ್ರೀ ಕೃಷ್ಣನು ಸತ್ಯಭಾಮೆಯೊಂದಿಗೆ ನರಕನ ಮೇಲೆ ಯುದ್ಧಕ್ಕೆ ಹೋದಾಗ ಐದುಮುಖದ ಈ ಮುರನು ಕೃಷ್ಣನನ್ನು ಇದಿರಿಸಿ ಹತನಾದ. [ಭಾಗ. ೧೦ ೫೯; ಭಾ. ಸ. ೫೫]

<u>ದ್ರೌಪದಿಮೊರೆ</u>:- ಪಾಂಡವರು ದ್ಯೂತದಲ್ಲಿ ದುರ್ಯೋಧನನಿಗೆ ಎಲ್ಲವನ್ನೂ ಸೋತಾಗ ಅವನು ದ್ರೌಪದಿಯನ್ನು ಸಭೆಗೆ ಎಳತರಿಸಿ ತನ್ನ ತಮ್ಮನಾದ ದುಶ್ಶಾಸನನಿಂದ ಆಕೆಯ ಸೀರೆಯನ್ನು ಎಳೆಸಲು ಆಕೆಯು ಕೃಷ್ಣನಿಗೆ ಮೊರೆಯಿಟ್ಟಳು.

## ನಾಮಸಂಕೀರ್ತನೆ ಹಾಗೂ ನರ್ತನ ಸೇವೆ

೩೬ ರಾಗ-ಪಂತುರಾವಳಿ

ಹರೇ ರಾಮ್ ರಾಮ್ ರಾಮ್ । ಸೀತಾ ರಾಮ್ ರಾಮ್ ರಾಮ್ ।
ದೀನಬಂಧೋ ರಾಮ್ ರಾಮ್ । ದೀನದಯಾಳೋ ರಾಮ್ ರಾಮ್ ।
ಪರಮಕೃಪಾಳೋ ರಾಮ್ ರಾಮ್ । ಭಕ್ತವತ್ಸಲ ರಾಮ್ ರಾಮ್ ।
ಕೃಪಾಸಿಂಧೋ ರಾಮ್ ರಾಮ್ । ಕರುಣಾಸಿಂಧೋ ರಾಮ್ ರಾಮ್ ।

**ಆಪದ್ಬಾಂಧವ ರಾಮ್ ರಾಮ್ । ಅನಾಥರಕ್ಷಕ ರಾಮ್ ರಾಮ್ ।**
**ದಶರಥನಂದನ ರಾಮ್ ರಾಮ್ । ದಶಮುಖಭಂಜನ ರಾಮ್ ರಾಮ್।**
**ಸಜ್ಜನಪಾಲಕ ರಾಮ್ ರಾಮ್ । ದುರ್ಜನಶಿಕ್ಷಕ ರಾಮ್ ರಾಮ್ ।**
**ರಾಮ್ ರಾಮ್ ರಾಮ್ ಸೀತಾ । ರಾಮ್ ರಾಮ್ ರಾಮ್ ಸೀತಾ ।**
**ರಾಮ್ ರಾಮ್ ರಾಮ್ ರಘುಪತಿ। ರಾಮ್ ರಾಮ್ ರಾಮ್ ರಘುಪತಿ।**
**ರಾಮ್ ರಾಮ್ ರಾಮ್ ಕೋದಂಡ । ರಾಮ್ ರಾಮ್ ರಾಮ್ ಕೋದಂಡ ।**
**ರಾಮ್ ರಾಮ್ ರಾಮ್ ಪಟ್ಟಾಭಿ। ರಾಮ್ ರಾಮ್ ರಾಮ್ ಪಟ್ಟಾಭಿ।**
**ರಾಮ್ ರಾಮ್ ರಾಮ್ ಅಯೋಧ್ಯಾ । ರಾಮ್ ರಾಮ್ ರಾಮ್ ಅಯೋಧ್ಯಾ ।**
**ರಾಮ್ ರಾಮ್ ರಾಮ್ । ಹರೇ । ರಾಮ್ ರಾಮ್ ರಾಮ್ ಹರೇ ॥**

ಸ. ಅ :- ಬಡವರ ಬಂಧುವೆ, ಅತ್ಯಂತ ಕೃಪಾಶಾಲಿಯೆ, ಭಕ್ತರಲ್ಲಿ ವಾತ್ಸಲ್ಯವುಳ್ಳವನೆ, ಕೃಪೆಗೆ ಕಡಲಿನಂತಿರುವವನೆ, ಕಷ್ಟಕಾಲಕ್ಕೆ ಒದಗುವ ನಂಟನೆ, ದಿಕ್ಕಿಲ್ಲದವರನ್ನು ರಕ್ಷಿಸುವವನೆ, ದಶರಥರಾಜನ ಮಗನೆ, ಹತ್ತು ತಲೆಯ ರಾವಣನನ್ನು ಭಂಗಿಸಿದವನೆ, ಸತ್ಪುರುಷರ ರಕ್ಷಕನೆ, ದುಷ್ಟರನ್ನು ದಂಡಿಸುವವನೆ, ಸೀತಾರಾಮನೆ, ರಘುವಂಶಕ್ಕೆ ಒಡೆಯನಾದ ರಾಮನೆ, ಬಿಲ್ಲನ್ನು ಹಿಡಿದಿರುವ ರಾಮನೆ, ಸಿಂಹಾಸನದಲ್ಲಿ ಬೆಳಗುವ ರಾಮನೆ, ಅಯೋಧ್ಯಾವಾಸಿಯಾದ ರಾಮನೆ, ನಿನ್ನ ನಾಮುಗಳನ್ನು ಮೇಲಿಂದ ಮೇಲೆ ಸಂಕೀರ್ತಿಸುತ್ತೇನೆ.

**ಜೈ ಜೈ ವಿಠಲ ಪಾಂಡುರಂಗ । ಜಯಹರಿವಿಠಲ ಪಾಂಡುರಂಗ ॥ ಪಲ್ಲ ॥**
**ಆಪದ್ಬಾಂಧವ ಪಾಂಡುರಂಗ । ಅನಾಥರಕ್ಷಕ ಪಾಂಡುರಂಗ ॥**
**ಭಕ್ತಪೋಷಕ ಪಾಂಡುರಂಗ । ಮುಕ್ತಿಪ್ರದಾಯಕ ಪಾಂಡುರಂಗ ॥**
**ತಂದೆ ವಿಠಲ ಪಾಂಡುರಂಗ । ತಾಯಿವಿಠಲ ಪಾಂಡುರಂಗ ॥**
**ಬಂಧುವಿಠಲಪಾಂಡುರಂಗ । ಬಳಗವಿಠಲ ಪಾಂಡುರಂಗ ॥**
**ಪುಂಡರೀಕವರದ ಪಾಂಡುರಂಗ । ಪಂಡರೀವಾಸ ಪಾಂಡುರಂಗ ॥**

ಟೂ : [ಈ ಗುಂಪಿನಲ್ಲಿ ಪಲ್ಲವಿಭಾಗವನ್ನು ಮಾತ್ರ ೩ ಆವರ್ತಿ ಹಾಡುವುದು. ಉಳಿದ ಪ್ರತಿ ಸಾಲನ್ನು ಹಾಡುತ್ತ ಪಲ್ಲವಿಯನ್ನೂ ಒಂದೊಂದಾವರ್ತಿ ಹಾಡುವುದು.]

ಸ. ಅ :- ಅರ್ಥವು ಸ್ಪಷ್ಟವಾಗಿಯೇ ಇದೆ.

ವಿ. ವಿ :-ಮುಕ್ತಿಪ್ರದಾತನೆ ಮೋಕ್ಷವನ್ನು ಕೊಡುವವನೆ.

ಪುಂಡರೀಕವರದ :- ಪುಂಡರೀಕನೆಂಬುವವನು ಪಾಂಡುರಂಗಸ್ವಾಮಿಯ ಪರಮ ಭಕ್ತ. ಅವನ ಭಕ್ತಿಗೆ ಮೆಚ್ಚಿ ಪರಮಾತ್ಮನು ಪ್ರತ್ಯಕ್ಷನಾದಾಗ ಮಾತಾಪಿತೃಗಳ ಸೇವೆಯಲ್ಲಿದ್ದ ಪುಂಡರೀಕನು ಉಚಿತವಾಗಿ ಮರ್ಯ್ಯಾದಿಸಲಾಗದೆ ತಾಯಿ ತಂದೆಗಳ ಸೇವೆಯನ್ನು ಮುಗಿಸಿ ಬರುವವರಿವಿಗೂ ದಯವಿಟ್ಟು ನಿದಾನಿಸಬೇಕೆಂದು ನಿಲ್ಲಲು ಒಂದು ಇಟ್ಟಿಗೆಯನ್ನು

ತೋರಿಸಿ ದೇವನನ್ನು ಬೇಡಿಕೊಂಡನಂತೆ. ಭಕ್ತನ ಕೋರಿಕೆಯಂತೆ ಅಂದಿನಿಂದ ಪಾಂಡುರಂಗಸ್ವಾಮಿಯು ಇಟ್ಟಿಗೆಯ ಮೇಲೆ ನಿಂತು ಭಕ್ತರಿಗೆ ಅಭೀಷ್ಟವನ್ನು ಸಲ್ಲಿಸುತ್ತಿರುವವನಾಗಿದ್ದಾನೆ.

**ಕೃಷ್ಣಾನಂತ ಮುಕುಂದ ಮುರಾರೆ–ವಾಮನಮಾಧವ ಗೋವಿಂದ ।**
**ಶ್ರೀಧರಕೇಶವರಾಘವ ವಿಷ್ಣೋ–ಲಕ್ಷ್ಮೀನಾರಾಯಣ ನೃಸಿಂಹ**
**ರಾಮಕೃಷ್ಣ ವಿಠಲ ಹರಿ ನಾರಾಯಣ–ನರಹರಿ ಮಾಧವನಮೋನಮೋ।**
**ವಿಠ್ಠಲ ವಿಠ್ಠಲ ವಿಠ್ಠಲ ವಿಠ್ಠಲ–ಜೈ ಜೈ ವಿಠ್ಠಲ ಜಯ ಹರಿ ವಿಠ್ಠಲ ।**
**ಪಾಂಡುರಂಗ ವಿಠ್ಠಲ–ಹರಿಗುರು ವಿಠ್ಠಲ ।**
**ವಿಠ್ಠಲ ವಿಠ್ಠಲ ವಿಠ್ಠಲ ವಿಠ್ಠಲ–ವಿಠ್ಠಲ ವಿಠ್ಠಲ ವಿಠ್ಠಲ ವಿಠ್ಠಲ ।**
**ಗಂಗಾ ತುಲಸೀ ಸಾಲಿಗ್ರಾಮ–ಕೇಶವ ಮಾಧವ ಗೋವಿಂದ ।**
**ಶ್ರೀಧರ ಕೇಶವ ರಾಘವ ವಿಷ್ಣೋ–ಲಕ್ಷ್ಮೀನಾಯಕ ನೃಸಿಂಹ ।**
**ರಾಮಕೃಷ್ಣ ರಾಮಕೃಷ್ಣ–ರಾಮಕೃಷ್ಣ ರಾಮಕೃಷ್ಣ ।**
**ರಾಧಾಕೃಷ್ಣ ರಾಧಾಕೃಷ್ಣ–ರಾಧಾಕೃಷ್ಣ ರಾಧಾಕೃಷ್ಣ ॥**

ಸ. ಅ :- ವಿವಿಧ ನಾಮಗಳ ಉಚ್ಚಾರ (ಸ್ಪಷ್ಟವಾಗಿಯೇ ಇದೆ)

ವಿ. ವಿ :- ಕೃಷ್ಣಃ :- ಕೃಷಿರ್ಭೂವಾಚಕೋಶಬ್ದೋ- ಣಶ್ಚನಿರ್ವೃತಿವಾಚಕಃ ।
ವಿಷ್ಣುಸ್ತದ್ಭಾವಯೋಗಾಚ್ಚ-ಕೃಷ್ಣೋಭವತಿ ಶಾಶ್ವತಃ ॥ ಎಂಬಂತೆ
ಭೂವಾಚ 'ಕೃಷಿ' ಶಬ್ದ ಮೋಕ್ಷಾರ್ಥ 'ಣ' ಕಾರ ಇವೆರಡರ ಸಂಯೋಗದಿಂದ ಕೃಷ್ಣನೆನಿಸಿಕೊಳ್ಳುವನು.

ಕೃಷ್ಣೋವರ್ಣಶ್ಚಮೇಯಸ್ಮಾ ತ್ತಸ್ಮಾತ್ಕೃಷ್ಣೋಹಮರ್ಜುನ ॥ ಎಂಬಂತೆ
ನೀಲಮೇಘಶ್ಯಾಮನಾದ ಆತನ ವರ್ಣವು ಕಪ್ಪು ಆಗಿರುವುದರಿಂದಲೂ ಕೃಷ್ಣನು.

ಅನಂತಃ :- ಕೊನೆ ಎಂಬುದೇ ಇಲ್ಲದವ; ಸದಾ ಸರ್ವದೇಶ, ಸರ್ವಕಾಲ, ಸರ್ವವಸ್ತುಗಳಲ್ಲೂ ಪರಿಪೂರ್ಣನಾಗಿ ಇರುವವ.

ಮುಕುಂದಃ :- ಮುಕ್ತಿಂ ದದಾತಿ ಇತಿ ಮೋಕ್ಷವನ್ನು ಕೊಡುವವನೆಂದು ಮುಕುಂದನು.

ಶ್ರೀಧರಃ :-ಧರತೀತಿ ಧರಃ । ಶ್ರಿಯೋಧರಃ–ಶ್ರೀಧರಃ.
ಸರ್ವಭೂತಾನಾಂ ಜನನೀಂಶ್ರಿಯಂ ವಕ್ಷಸಿವಹಿನ್ ಶ್ರೀಧರಃ-
ಲೋಕಮಾತೆಯಾದ ಲಕ್ಷ್ಮೀದೇವಿಯನ್ನು ತನ್ನ ವೃಕ್ಷಸ್ಥಲದಲ್ಲೇ ಧರಿಸಿರುವುದರಿಂದ ಶ್ರೀಧರನು.

ರಾಘವಃ :- ರಘುಪತೇಃ ಅಪತ್ಯಂಪುಮಾ‌ನ್ ರಾಘವಃ- ರಘುವಂಶಜಾತ ರಾಘವನು.

ಗಂಗಾ, ತುಲಸೀ, ಸಾಲಿಗ್ರಾಮ (ವಿಷ್ಣುವಿನ ವಿವಿಧಮೂರ್ತಿಗಳ ಶಿಲೆ) ಇವು ಮೂರು.
ವಿಷ್ಣು ಭಕ್ತರಿಗೆ ಅತ್ಯಂತ ಪಾವನವಾದ ಪೂಜನೀಯ ವಸ್ತುಗಳು.

---

ಸೂ: [ಈ ಮೇಲಿನ ಮೂರು ಖಂಡಗಳಲ್ಲಿ ಪ್ರತಿಯೊಂದನ್ನೂ ಚತುರಶ್ರಗತಿಯಲ್ಲಿ ತಾಳ ಹಾಕಿಕೊಂಡು ನಾಮಭಜನೆ ಮಾಡುತ್ತ, ಮಧ್ಯ ಮತ್ತು ದ್ರುತಕಾಲಗಳಲ್ಲಿ ನರ್ತನಸೇವೆಯನ್ನೂ ಸಲ್ಲಿಸಬಹುದು.]

# ಉಗಾಭೋಗಗಳು

**ಹಗಲು ನಿನ್ನ ನೆನೆಯಲಿಲ್ಲ ಹಸಿವೆ ತೃಷೆಯಿಂದ । ಇರುಳು ನಿನ್ನ ನೆನೆಯಲಿಲ್ಲ**
**ನಿದ್ರೆಯು ಭರದಿಂದ । ಈ ಎರಡರ ಬಾಧೆಗೆ ನಾ ಒಳಗಾದೆನು ।**
**ಪುರಂದರವಿಠ್ಠಲ । ಜೈ ಜೈ ಪುರಂದರವಿಠ್ಠಲ ॥**

ಸ. ಅ :- ಎಲೈ ಪುರಂದರವಿಠಲಸ್ವಾಮಿಯೆ, ಸೂರ್ಯನು ಬೆಳಗುವ ಕಾಲದಲ್ಲಿ ಹಸಿವು-ನೀರಡಿಕೆಯ ಬಾಧೆಯಿಂದಲೂ; ರಾತ್ರಿಯ ವೇಳೆ ನಿದ್ರೆಯ ಒತ್ತಡದಿಂದಲೂ ನಿನ್ನನ್ನು ಸ್ಮರಿಸಲಶಕ್ತನಾಗಿದ್ದೇನೆ. ನನ್ನನ್ನು ರಕ್ಷಿಸು. ವಿಜಯಿಯಾಗು.

ವಿ. ವಿ : ಹಸಿವು, ನೀರಡಿಕೆ, ನಿದ್ರೆ-ಇವೆಲ್ಲ ಜೀವಿಗಳಿಗೆ ಸ್ವಾಭಾವಿಕವಾದ ಉಪಾಧಿಗಳು. ಆದರೆ ಮನುಷ್ಯನಿಗೆ ಬುದ್ಧಿವಿಶೇಷದಿಂದ ವಿವೇಚನಾಶಕ್ತಿಯು ಇರಲು ತನ್ನ ಉನ್ನತಿಯನ್ನು ಸಾಧಿಸಲು ಅವಶ್ಯಕರ್ಮವನ್ನು ಅರಿತು ಆಚರಣೆಗೆ ತರಬೇಕೆಂಬುದು ಗಮನಾರ್ಹ.

**ಹಾಡಿದರೆನ್ನೊಡೆಯನ ಹಾಡುವೆ-ಬೇಡಿದರೆನ್ನೊಡೆಯನ ಬೇಡುವೆ ।**
**ಒಡೆಯಗೆ ಒಡಲನು ತೋರುವೆ-ಯನ್ನ-ಬಡತನ ಬಿನ್ನಹ-ಮಾಡುವೆ ।**
**ಒಡೆಯ ಪುರಂದರವಿಠ್ಠಲರಾಯನ-ಅಡಿಗಡಿಗೆ ನಾ ಎರಗುವೆ ॥**

ಸ. ಅ :- ಹಾಡುವುದಾದರೆ ನನ್ನ ಪ್ರಭುವನ್ನು, ಕೇಳಿಕೊಳ್ಳುವುದು ಸಹ ಆತನನ್ನೆ ; ನನ್ನ ದೇಹವನ್ನೂ (ದೇಹದಲ್ಲಿ ಒದಗಿರುವ ಆತಂಕವನ್ನೂ), ನನ್ನ ದಾರಿದ್ರ್ಯವನ್ನೂ ಆತನಿಗೇ ಎಂದರೆ ಶ್ರೀ ಪುರಂದರವಿಠಲಾಂತರ್ಗತ ಸ್ವಾಮಿಗೇ ಅರಿಕೆಮಾಡಿಕೊಳ್ಳುತ್ತೇನೆ. ಆತನ ಪಾದಗಳಿಗೇ ಆಗಾಗ್ಗೆ ನಮಸ್ಕರಿಸುತ್ತೇನೆ.

ವಿ. ವಿ :- ಒಡಲ್ - ಶರೀರ, ದೇಹ. ಬಿನ್ನಹ—ವಿಜ್ಞಾಪನೆ, ಅರಿಕೆ, ಹೇಳಿಕೊಳ್ಳುವುದು. 'ಅನ್ಯಥಾಶರಣಂ ನಾಸ್ತಿ-ತ್ವಮೇವ ಶರಣಂ ಮಮ' ಎಂದು ನಂಬಿ ಸರ್ವಶಕ್ತನಿಗೇ ನಮ್ಮ ಸಮಸ್ತ ಸುಖದುಃಖಗಳನ್ನೂ ನಿವೇದಿಸಬೇಕೆಂಬ ಭಾವ.

**ಇಂದಿನ ದಿನವೇ ಶುಭದಿನವು-ಇಂದಿನವಾರ ಶುಭವಾರ ।**
**ಇಂದಿನ ತಾರೆ ಶುಭತಾರೆ-ಇಂದಿನ ಕರಣ ಶುಭಕರಣ ।**
**ಇಂದಿನ ಯೋಗ ಶುಭಯೋಗ-ಇಂದಿನ ಲಗ್ನ ಶುಭಲಗ್ನ ।**
**ಇಂದು ಪುರಂದರವಿಠ್ಠಲರಾಯನ-ನೆನಸಿದ ದಿನವೇ ಶುಭದಿನವು ।**
**ಭಜಿಸಿದ ದಿನವೇ ಶುಭದಿನವು ॥**

ಸ. ಅ :- ಈ ದಿನಕ್ಕೆ (ಭಗವಂತನನ್ನು ಧ್ಯಾನಿಸುವ ಅಥವ ಉಪಾಸಿಸುವ ದಿನಕ್ಕೆ) ಸಂಬಂಧಿಸಿದ ತಿಥಿ, ವಾರ, ನಕ್ಷತ್ರ, ಕರಣ, ಯೋಗ, ಲಗ್ನ ಪ್ರತಿಯೊಂದೂ ಶುಭದಾಯಕವೆ ಸರಿ.

ವಿ. ವಿ :- ಯಾವುದಾದರೂ ಕಾರ್ಯವನ್ನು ಮಾಡಲು ಸಂಕಲ್ಪಿಸುವ ಮೊದಲು
ಅಪವಿತ್ರಃ ಪವಿತ್ರೋವಾ.ಸರ್ವಾವಸ್ಥಾಂಗತೋಪಿವಾ।
ಯಃಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಶ್ಶುಚಿಃ ॥ ಎಂದು
ನೀರನ್ನು ಪ್ರೋಕ್ಷಿಸಿ ದೇಹದ ಒಳ-ಹೊರಗನ್ನು ಶುದ್ಧೀಕರಿಸಿಕೊಂಡು
ತದೇವಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ।
ವಿದ್ಯಾಬಲಂ ದೈವಬಲಂ ತದೇವ ಸ್ಮರೇದ್ಯದಾ ವಿಷ್ಣುಪದಾಂಘ್ರಿಯುಗ್ಮಮ್ ॥
ಎಂದು ಭಗವಂತನನ್ನು ನಂಬಿ; ಪಂಚಾಂಗವನ್ನು ಎಂದರೆ-ಆಯಾ ದಿನಕ್ಕೆ ಸಂಬಂಧಿಸಿದ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳನ್ನು ಉಚ್ಚರಿಸುವುದು ಹಿಂದುಗಳ ಪದ್ಧತಿ.

---

ಸೂ: ಈ ಮೂರನೆಯ ಉಗಾಭೋಗವನ್ನು ಪುರಂದರದಾಸರು ತಮಗೆ ಭಗವಂತನ ಸಾಕ್ಷಾತ್ಕಾರವಾದ ವೇಳೆ ಹಾಡಿದರೆಂದೂ ಅದರ ಸೂಚನೆಗಾಗಿ ದಾಸರು, 'ಇಂದು ಪುರಂದರವಿಠ್ಠಲರಾಯನಸಂದರ್ಶನ ಫಲ-ವೆನಗಾಯ್ತು' ಎಂದು ಹಾಡಿದರೆಂದೂ, ಹೇಳುವುದುಂಟು. ಪ್ರಕೃತ ಕಾಲಕ್ಕೆತಕ್ಕಂತೆ ಭಜಿಸುವವರಿಗಾಗಿ ಈ ವ್ಯತ್ಯಾಸವನ್ನು ಇಲ್ಲಿ ಏರ್ಪಡಿಸಿಕೊಳ್ಳಲಾಗಿದೆ.

## ದೇವರ ಸನ್ನಿಧಿಯಲ್ಲಿ ವಾದಿರಾಜರ ಪ್ರಾರ್ಥನೆ

೩೭ ರಾಗ–ಆನಂದಭೈರವಿ ತಾಳ–ಮಿ. ಛಾ.

**ಎನಗೆ ನಿನ್ನಲಿಭಕುತಿ-ಇರಲಿ ಇಲ್ಲದಿರಲಿ-ಜನರು ಹರಿಭಕುತನೆಂ-**
**ದೆನ್ನ ಕರೆಯುತ್ತಿರಲು ।**
**ಮನ ಪಾಪಕ್ಕೆರಗದಂ–ತೆ ಅನುದಿನ ನೀ–ಎನ್ನ ಕಾಯ–ಬೇಕಾಯಿತು ।**
**ಅನಿಮಿತ್ತ ಸುಜನ ಬಂಧೋ ॥೧॥**
**ಕನರಿಸಿ ಯಮಭಟರು-ಮುಂದೆ ಕೊಂಡ್ಹೋದರೆ-ಘನತೆಗೆ ಸ-ಲ್ಲದಯ್ಯ।**
**ತನ್ನವರ ಹಯವದನ–ಅನ್ಯರಿಗೊಪ್ಪಿಸಿದ–ನೆಂಬ ದುರ್ವಾರ್ತೆಯ ಬೇಗ**
**ತಪ್ಪಿಸಿಕೋ । ಮುನಿಜನ ವಂದ್ಯಪಾದ ॥೨॥**
**ನಾನಿನ್ನ ಮರೆತರು-ನೀಎನ್ನಮರೆವರೆ–ಹಾನಿಯಲ್ಲವೆ ನಿನ್ನ-**
**ಭಕ್ತವತ್ಸಲತೆಗೆ ।**
**ಹೀನತೆ ಬಂದಿತಾಗಿ–ದೀನ ರಕ್ಷಕ–'ನ ಋತೇ ತತ್ಕ್ರಿಯತೇ ಕಿಂ-**
**ಚನಾರೇ' ಎಂಬೋ ಮಾನವು ನಿನ್ನದಾಗಿ ॥೩॥**
**ನೀನುದಾಸೀನಮಾಡೆ ಖಳರಸೇನೆ ಸ–ಜ್ಜನರ ಕುಂದಿಪುದ–ಲ್ಲವೆ....।**
**ಶ್ರೀನಾಥ ಹಯವದನ–ಶಿಶುಗಳ ತಪ್ಪುಗಳ–ಜಾಣ ನೀಜರೆದರೆ–**
**ಜಗವೆಲ್ಲ ನಗುವುದು । ಜಾಣರ ಜಾಣ ನೀನೆ ॥೪॥**

ಸ. ಅ :- ಅಕಾರಣ ಬಂಧುವಾದ ದೇವನೆ, ನನಗೆ ನಿನ್ನಲ್ಲಿ ಭಕ್ತಿ ಇರಲಿ–ಇಲ್ಲದಿರಲಿ ಜನರು ಮಾತ್ರ (ನನ್ನನ್ನು) ಹರಿಭಕ್ತನೆಂದು ಕರೆಯುತ್ತಿರಲು; ನನ್ನ

ಮನಸ್ಸು ಪಾಪಕರ್ಮಕ್ಕೆಳಸದಂತೆ ಪ್ರತಿದಿನ ರಕ್ಷಿಸುವ ಹೊಣೆಯು ನಿನ್ನದೇ ಆಯಿತು.

೨ - ಮುನಿಜನರಿಂದ ನಮಸ್ಕರಿಸಲ್ಪಟ್ಟ ಪಾದಗಳುಳ್ಳ ದೇವನೆ-ಯಮಭಟರು (ನನ್ನನ್ನು) ಗದರಿಸಿ ಹಿಡಿದು ಮುಂದಕ್ಕೆಕರೆದೊಯ್ದರೆ ನಿನ್ನ ಹಿರಿಮೆಗೆ ತಕ್ಕು ದಲ್ಲವಲ್ಲ ! ಹಯವದನ ಮೂರ್ತಿಯು ತನ್ನವರನ್ನು ಬೇರೆಯವರಿಗೆ ಒಪ್ಪಿ ಸಿದನೆಂಬ ಅಪವಾದವನ್ನು ಬೇಗನೆ ನಿವಾರಿಸಿಕೊ.

೩ - 'ತೇನವಿನಾ ತೃಣಮಪಿನ ಚಲತಿ'–ಎಂಬಂತೆ ದೂರವಲ್ಲಾಗಲೀ, ಸಮೀಪದ ಲ್ಲಾಗಲಿ ನೀನು ಹೊರತು ಮತ್ತಾರಿಂದಲೂ ಚಲನೆ ಮಾಡಲ್ಪಡುವುದಿಲ್ಲವೆಂಬ ಗೌರವವೂ ನಿನ್ನದೇ ಆಗಿರಲು; ದೀನರಕ್ಷಕನಾದ ದೇವನೆ ನಾನು ನಿನ್ನನ್ನು ಮರೆತರೂ ನೀನು ನನ್ನನ್ನು ಮರೆಯುವುದೇ ? ಅದು ನಿನ್ನ ಭಕ್ತವತ್ಸಲತೆಗೆ ಕುಂದಲ್ಲವೆ ? (ಆದುದರಿಂದ ಅದಕ್ಕೆ ಅವಕಾಶಕೊಡಬೇಡವೆಂಬ ಬೇಡಿಕೆ)

೪ - ಲಕ್ಷ್ಮೀಪತಿಯೂ, ಹಯವದನ ಮೂರ್ತಿಯೂ ಆದ ಹೇ (ಕೃಷ್ಣಸ್ವಾಮಿಯೆ) ನೀನು ಅಲಕ್ಷಿಸಿದಲ್ಲಿ ನೀಚರ ಸಂಖ್ಯೆ ಬೆಳೆದು ಸತ್ಪುರುಷರು ಕುಗ್ಗುವರಲ್ಲವೆ? ಜಾಣರಲ್ಲಿ ಜಾಣನಾದ ನೀನು ನಿನ್ನ ಮಕ್ಕಳುಗಳ ತಪ್ಪನ್ನು ಹೀಯಾಳಿಸಿ ದಲ್ಲಿ ಲೋಕವು ನಕ್ಕೀತು. (ಕೈಬಿಡಬೇಡವೆಂಬ ಭಾವ.)

ವಿ. ವಿ :- ಕನರಿಸಿ = ಗದರಿಸಿ.

ಭಾವಾರ್ಥ :- ಹೇ ಲಕ್ಷ್ಮೀಪತಿಯೆ, ಹಯವದನದೇವನೆ, ಋಷಿಗಳಿಂದ ವಂದ್ಯನೆ, ಜಾಣರ ದೊರೆಯೆ, ಕೃಷ್ಣ ನಾನು ನಿನ್ನ ಭಕ್ತನೆಂಬ ಸೋಗಿನಲ್ಲಿರಬಹುದು, ಜನರು ಮಾತ್ರ ನಾನು ನಿನ್ನ ಭಕ್ತನು ಎನ್ನುವರು. ಆದುದರಿಂದ ನಿನ್ನಲ್ಲಿ ದೃಢಭಕ್ತಿಕೊಟ್ಟು ಅನುಗ್ರ ಹಿಸು. ನನ್ನ ಮನಸ್ಸು ಪಾಪಕರ್ಮಕ್ಕೆ ಎಳಸದಂತೆ ಕರುಣಿಸು. ಯಮಪಾಶಕ್ಕೆ ನನ್ನನ್ನು ಗುರಿಮಾಡಬೇಡ. ಅಜ್ಞತೆಯಿಂದ ನಾನು ನಿನ್ನನ್ನು ಮರೆತರೂ ನೀನು ಮಾತ್ರ ಮರೆಯ ಬಾರದು. ನೀನು ಭಕ್ತವತ್ಸಲನು. ನಿನ್ನ ಉದ್ದೇಶಕ್ಕೆ ವಿರುದ್ಧವಾಗಿ ಯಾವ ಬಗೆಯ ಚಲನೆಯೂ ಆಗದು. ನೀನು ಉದಾಸೀನ ಮಾಡಿದಲ್ಲಿ ದುಷ್ಟರೇ ಹೆಚ್ಚಿಕೊಳ್ಳುವರು. ಕೃಪೆ ಇರಲಿ

## ಶ್ರೀನಿವಾಸ ದೇವರಲ್ಲಿ ಪ್ರಾರ್ಥನೆ

೩೮ ರಾಗ–ಆರಭಿ ತಾಳ–ಆದಿ

ಪಲ್ಲವಿ :- ಹರೇ ವೆಂಕಟಶೈಲವಲ್ಲಭ-ಸ್ಮರಿಸುವೆ ನಾ ನಿನ್ನ ||

ಅ. :- ಕರುಣಾಪೂರ್ಣ ವರಪ್ರದ ಚರಿತ-ಪರಿಪಾಲಿಸು ನಮ್ಮ ||

ಚ. ೧ - ಪತಿತಪಾವನ ನತಜನ ಅತಿಹಿತ-ದಿತಿಜಮಥನ ರಂಗ |
ಪ್ರತತಾಚ್ಯುತ ಅಚ್ಯುತನಿಲಯನೆಕೇಳ್-ಸತತಸುಗುಣ ರಂಗ ||೧||

೨ - ದೋಷದೂರ ಪರಾಶರಾರ್ಚಿತ-ಕ್ಲೇಶನಾಶ ದೇವ ||ಭಕ್ತ ರ||
ವಾಸುದೇವ ಸರ್ವೇಶ ಸಾಧುಜನ-ಪೋಷ ಸುಪ್ರಭಾವ ||೨||

೩ - ಅಜಭವಸುತಪದ ದ್ವಿಜಧ್ವಜಗಮನ–ಭಜಕರ ಭಯಹಾರಿ ||ಭಕ್ತರ||
ತ್ರಿಜಗ ಪೋಷಕ ಶ್ರೀಪತಿವಿಠ್ಠಲ-ನಿಜಜನರುಪಕಾರಿ ||೩||

ಸ. ಅ :- ವೆಂಕಟಗಿರಿಯ ಒಡೆಯನಾದ ಹರಿಯೆ ನಿನ್ನನ್ನು ಸ್ಮರಿಸುತ್ತೇನೆ || ಅತ್ಯಂತ ಕರುಣೆಯ.ಉಳ್ಳವನೂ, ವರವನ್ನು ಕೊಡುವ ಆತ್ಮವೃತ್ತವುಳ್ಳವನೂ ಆದವನೇ ನಮ್ಮನ್ನು ರಕ್ಷಿಸು ||

ಚ. ೧ - ಪಾಪಿಷ್ಠರನ್ನು ಶುದ್ಧಿಗೊಳಿಸುವವನೂ, ನಮಸ್ಕರಿಸಿದವರಿಗೆ ಅತಿಯಾಗಿ ಒಳ್ಳೆಯದನ್ನು ಮಾಡುವವನೂ, ದೈತ್ಯಸಂಹಾರಕನೂ, ನಾಶವಿಲ್ಲದೆ ವಿಸ್ತಾರಗೊಂಡಿರುವವನೂ, ಮೋಕ್ಷನಿಲಯನೂ (ವೈಕುಂಠವಾಸನೂ) ಸದಾ ಸದ್ಗುಣಿಯೂ ಆದ ರಂಗನೇ [ನನ್ನ ಪ್ರಾರ್ಥನೆಯನ್ನು] ಆಲಿಸು ||

೨ - ದುರ್ಗುಣರಹಿತನೂ, ಪರಾಶರರಿಂದ ಪೂಜಿತನೂ, ಕಷ್ಟವನ್ನು ಹೋಗಲಾಡಿಸುವವನೂ, ವಾಸುದೇವನಾಮಕನೂ, ಎಲ್ಲಕ್ಕೂ ಒಡೆಯನೂ, ಸತ್ಪುರುಷರನ್ನು ರಕ್ಷಿಸುವವನೂ, ಒಳ್ಳೆಯ ಮಹಿಮಾಯುತನೂ ಆದವನೆ (ನಮ್ಮ ಬೇಡಿಕೆಯನ್ನು ಆಲಿಸು).

೩ - ಬ್ರಹ್ಮ–ರುದ್ರರಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನೂ, ಪಕ್ಷಿಯ (ಗರುಡನ ಚಿಹ್ನೆಯಿಂದ (ಗರುಡವಾಹನನಾಗಿ) ಸಂಚರಿಸುವವನೂ, ಭಜಿಸುವವರ ಭಯವನ್ನು ನೀಗುವವನೂ, ಮೂರು ಲೋಕಗಳ ರಕ್ಷಕನೂ, ಶ್ರೀಪತಿ ವಿಠಲಾಂತರ್ಗತನೂ, ನಿನ್ನವರಿಗುಪಕರಿಸುವವನೂ ಆದ ಹರಿಯೇ [ನಮ್ಮ ಪ್ರಾರ್ಥನೆಯನ್ನು] ಕೇಳು.

ವಿ. ವಿ :- ದಿತಿಜರು ದಿತಿದೇವಿಯ ಮಕ್ಕಳು (ದೈತ್ಯರು)
(ಪ್ರತತ+ ಅಚ್ಯುತ) ಅಚ್ಯುತ ನಾಶವಿಲ್ಲದ; ಪ್ರತತ ವಿಸ್ತಾರ.
ಅಚ್ಯುತ ನಿಲಯ ಅಚ್ಯುತ—ನಾಶವಿಲ್ಲದ, ನಿಲಯ ಮನೆ (ವೈಕುಂಠ
ಪರಾಶರ ವಸಿಷ್ಠ ಪುತ್ರ 'ಶಕ್ತಿ'ಗೆ 'ಅದೃಶ್ಯನ್ತಿ' ಎಂಬಾಕೆಯಲ್ಲಿ ಜನಿಸಿದವನೀತನು
ಇವನು ಗರ್ಭದಲ್ಲಿರುವಾಗಲೆ ತಂದೆ ಶಕ್ತಿಯನ್ನು ಒಬ್ಬ ರಾಕ್ಷಸನು ಸಂಹರಿಸಿದನು.
ಇವನು ಮಾತೃಗರ್ಭದಲ್ಲಿರುವಾಗಲೆ ವೇದೋಚ್ಚಾರವು ನಡೆಯುತ್ತಿದ್ದಿತು.
ತಾತ ವಸಿಷ್ಠ ಋಷಿಯು ಈ ಮಗುವಿಗೆ ಪರಾಶರನೆಂದು ಹೆಸರಿಟ್ಟರು.
ವಸಿಷ್ಠರು ತಮ್ಮ ಪುತ್ರ ಶಕ್ತಿಯು ಸತ್ತಾಗ ಸಂತತಿ ವಿಚ್ಛೇದವಾಯಿತಲ್ಲ ! ಎಂಬ ವ್ಯಸನದಿಂದ ಜೀವನದಾಸೆಯನ್ನೇ ತೊರೆಯಬೇಕೆಂದಿದ್ದಾಗ ಈ ಮಗುವು ಉದಯವಾಗಲು ಪರಾಶರಾಗಿದ್ದ (ಜೀವಿತದಾಸೆಯನ್ನು ತೊರೆದಿದ್ದ) ವಸಿಷ್ಠರು ಗೃಹಸ್ಥಾಶ್ರಮಕ್ಕೆ ಹಿಂದಿರುಗಿದುದರಿಂದ ಮಮ್ಮಗನಿಗೆ ಪರಾಶರನೆಂದು (ಪರಾಸ್ತಾ-ಆಶಾ-ಯಸ್ಯ-ಸಃ ಪರಾಶಃ ; ಪರಾಶಂ ರಾತಿ ಸ್ವಕಾರ್ಯತತ್ಪರಂ ಕರೋತಿ ಇತಿ ಪರಾಶರಃ) ಹೆಸರಿಟ್ಟರು. ಪರಾಶರನು ತನ್ನ ತಂದೆ ರಾಕ್ಷಸನಿಂದ ಹತನಾದುದನ್ನರಿತು ಲೋಕವನ್ನೇ ನಾಶಗೊಳಿಸಲು ಯಜ್ಞಕ್ಕೆ ತೊಡಗಿದಾಗ ತಾತ ವಸಿಷ್ಠರು ಆ ಯಜ್ಞವನ್ನು ರಾಕ್ಷಸರ ನಾಶಕ್ಕಾಗಿ ಮಾತ್ರ ಆಚರಿಸುವಂತೆ ಪ್ರೇರಿಸಿದರು. ಈತನ ರಚನೆ ಪರಾಶರ ಗೀತೆ ಅಥವ ಸ್ಮೃತಿ.

ಶ್ರೀಪತಿವಿಠಲರು :- ವಿಜಯದಾಸರ ಶಿಷ್ಯರು ವೇಣುಗೋಪಾಲದಾಸರು, ಅವರ ಶಿಷ್ಯರು ವ್ಯಾಸವಿಠಲರು, ವ್ಯಾಸವಿಠಲರ ಶಿಷ್ಯರು ರಘುಪತಿವಿಠಲರು, ರಘುಪತಿವಿಠಲರ ಶಿಷ್ಯರು ಶ್ರೀಪತಿವಿಠಲರು.

## ದೇವರಲ್ಲಿ ಜಗನ್ನಾಥದಾಸರ ಪ್ರಾರ್ಥನೆ

೩೯ ರಾಗ–ಆರಭಿ ತಾಳ–ಆದಿ

ಪಲ್ಲವಿ :- **ದಾಸೋಹಂ ತವ ದಾಸೋಹಂ ತವ ||**

ಅ. ಪ :- **ವಾಸುದೇವ ವಿಗತಾಘಸಂಘ ತವ ||**

ಚ. ೧ - **ಜೀವಾಂತರ್ಗತ ಜೀವನಿಯಾಮಕ-ಜೀವವಿಲಕ್ಷಣ ಜೀವನದ |**
**ಜೀವಾಧಾರಕ ಜೀವರೂಪ ರಾ–ಜೀವಭವಜನಕ**
**ಜೀವೇಶ್ವರ (ತವ) ||೧||**

೨ - **ಕಾಲಾಂತರ್ಗತ ಕಾಲನಿಯಾಮಕ ಕಾಲಾತೀತ ತ್ರಿಕಾಲಜ್ಞ |**
**ಕಾಲಪ್ರವರ್ತಕ ಕಾಲನಿವರ್ತಕ ಕಾಲೋತ್ಪಾದಕ**
**ಕಾಲರೂಪ (ತವ) ||೨||**

೩ - **ಕರ್ಮಕರ್ಮಕೃತ ಕರ್ಮಕೃತಾಗಮ-ಕರ್ಮಫಲಪ್ರದ ಕರ್ಮಜಿತ |**
**ಕರ್ಮಬಂಧ ಮಹಕರ್ಮವಿಮೋಚಕ ಕರ್ಮನಿಗ್ರಹ**
**ಕರ್ಮಸಾಕ್ಷಿ (ತವ) ||೩||**

೪ - **ಧರ್ಮಯೂಪ ಮಹಧರ್ಮ ವಿವರ್ಧನ ಧರ್ಮವಿದೋತ್ತಮ ಧರ್ಮನಿಧೇ|**
**ಧರ್ಮಸೂಕ್ಷ್ಮ ಮಹಧರ್ಮ ಸಂರಕ್ಷಕ ಧರ್ಮಸಾಕ್ಷಿ**
**ಯಮಧರ್ಮ ಮಿತ್ರ (ತವ) ||೪||**

೫ - **ಮಂತ್ರಯಂತ್ರಮಯ ಮಂತ್ರಬೀಜಮಯ ಮಂತ್ರರಾಜ ಗುರು**
**ಮಂತ್ರಧೃತ ಮಂತ್ರಮೇಯ ಮಹಮಂತ್ರಗಮ್ಯ ವರಮಂತ್ರದೇವ**
**ಜಗನ್ನಾಥವಿಠಲ (ತವ) ||೫||**

ಸ. ಅ :- ನಾನು ನಿನ್ನ ದಾಸನು ನಿನ್ನ ದಾಸನು (ಆಗಿದ್ದೇನೆ.)
ದೂರ ಹೋದ, ಕಳೆದು ಹೋದ ಪಾಪಸಮೂಹವುಳ್ಳ ವಾಸುದೇವನೇ ನಾನು ನಿನ್ನ ದಾಸನು.

ಚ. ೧ - ಜೀವಾತ್ಮನ ಒಳಗಿರುವ, ಜೀವಾತ್ಮನನ್ನು ಆಜ್ಞೆ ಮಾಡುವ, ಜೀವಾತ್ಮನಿಗಿಂತ ಬೇರೆಯಾದ, ಜೀವನವನ್ನು (ಬಾಳನ್ನು) ಉಂಟುಮಾಡುವ, ಜೀವಾತ್ಮನಿಗೆ ಆಶ್ರಯನಾದ, ಜೀವಾತ್ಮನ ಆಕಾರವುಳ್ಳವನಾದ (ರಾಜೀವ + ಭವ + ಜನಕ) ಕಮಲದಲ್ಲಿ ಹುಟ್ಟಿದ ಬ್ರಹ್ಮನತಂದೆಯಾದ, ಜೀವಾತ್ಮನಿಗೆ ಒಡೆಯನಾದ ಹೇ ವಾಸುದೇವನೆ ! (ನಾನು ನಿನ್ನ ದಾಸನು)

೨ - ಕಾಲನಲ್ಲಿ ಅಂತರ್ಗತನಾಗಿರುವ, ಕಾಲನಿಗೂ ಆಜ್ಞೆ ಮಾಡುವ, ಕಾಲನಿಗಿಂತ ಬೇರಾದ ತ್ರಿಕಾಲಗಳನ್ನೂ ತಿಳಿದವನಾದ, ಕಾಲನನ್ನು ಪ್ರೇರಿಸುವ,

ಕಾಲನನ್ನು ಹಿಂದಿರುಗಿಸುವ, ಕಾಲನನ್ನು ಸೃಷ್ಟಿಸುವ, ಕಾಲರೂಪನೆ ಆದ ಹೇ ವಾಸುದೇವನೆ (ನಾನು ನಿನ್ನ ದಾಸನು)

೩ - ಒಳ್ಳೆಯ ಇಲ್ಲವೆ ಕೆಟ್ಟ ಕೆಲಸಗಳನ್ನು ಮಾಡಿಸುವ ಆಯಾ ಕರ್ಮಗಳಿಂದ ಪ್ರಾಪ್ತವಾಗುವ ಫಲವನ್ನು ಅನುಗ್ರಹಿಸುವ, ಜಯಿಸಲ್ಪಟ್ಟ ಕರ್ಮವುಳ್ಳ, ಜೀವಿಗಳನ್ನು ಕರ್ಮದಿಂದ ಕಟ್ಟುವ, ವಿಶೇಷಕರ್ಮಗಳಿಂದ ಬಿಡಿಸುವ, ಕರ್ಮಗಳನ್ನು ಅಡಗಿಸುವ, ಕರ್ಮಕ್ಕೆ ಸಾಕ್ಷಿಯಾದ ಹೇ ! ವಾಸುದೇವನೆ (ನಾನು ನಿನ್ನ ದಾಸನು.)

೪ - ಧರ್ಮಕ್ಕೆ ಯಜ್ಞಸ್ತಂಭರೂಪದ, ಶ್ರೇಷ್ಠ ಧರ್ಮವನ್ನು ಹೆಚ್ಚಿಸುವ ಧರ್ಮಜ್ಞರಲ್ಲಿ ಉತ್ತಮನಾದ, ಧರ್ಮಕ್ಕೆ ನಿಕ್ಷೇಪಸ್ಥಾನನಾದ, ಧರ್ಮಸೂಕ್ಷ್ಮ ಪರಿತವನಾದ, ಶ್ರೇಷ್ಠವಾದ ಧರ್ಮರಕ್ಷಕನಾದ, ಧರ್ಮಕ್ಕೆ ಸಾಕ್ಷಿಭೂತನಾದ ಯಮಧರ್ಮನ ಮಿತ್ರನಾದ ಹೇ ! ವಾಸುದೇವನೆ (ನಾನು ನಿನ್ನ ದಾಸನು.)

೫ - ಮಂತ್ರಯಂತ್ರಗಳಲ್ಲೆಲ್ಲ ವ್ಯಾಪ್ತನಾದ, ಆ ಮಂತ್ರಗಳಲ್ಲಿ ಬೀಜಾಕ್ಷರ ರೂಪನಾದ (ಗಾಯತ್ರಿಯಂತಹ) ಶ್ರೇಷ್ಠ ಮಂತ್ರಕ್ಕೇ ಗುರುವಾದ, ಮಂತ್ರಗಳನ್ನು ಧರಿಸಿರುವ, ಮಂತ್ರದಿಂದ ಊಹಿಸಲಸಾಧ್ಯನಾದ, ಮಹಾಮಂತ್ರಗಳಿಂದ ಹೊಂದಲು ಸಾಧ್ಯನಾದ, ಶ್ರೇಷ್ಠ ಮಂತ್ರಗಳಿಗೆ ಅಧಿದೇವನಾದ, ಜಗನ್ನಾಥ ವಿಠಲಾಂತರ್ಗತ ಹೇ ! ವಾಸುದೇವನೆ (ನಾನು ನಿನ್ನ ದಾಸನು).

ವಿ. ವಿ :- (ದಾಸಃ + ಅಹಂ) ದಾಸನು ನಾನು, ತವ ನಿನ್ನ, ವಿಗತ ಅಘ ಸಂಘ ನಿವೃತ್ತಿಯಾದ ಪಾಪದ ಸಮೂಹ. ರಾಜೀವ – ಕಮಲ, ಭವ ಹುಟ್ಟಿದ ಬ್ರಹ್ಮನ, ಜನಕ= ತಂದೆ (ವಿಷ್ಣು)-ತ್ರಿಕಾಲಗಳು– ಭೂತ ಕಳೆದುದು), ವರ್ತಮಾನ (ನಡೆಯುತ್ತಿರುವುದು.) ಭವಿಷ್ಯತ್ ಮುಂದಾಗುವುದು ಯೂಪ - ಯಜ್ಞಕರ್ಮದಲ್ಲಿ ನಡುವೆ ನೆಡುವ ಕಂಭ. ಧರ್ಮವಿತ್ ಧರ್ಮವನ್ನು ಬಲ್ಲವ. ಮೇಯ-ಅಳೆಯಲ್ಪಡುವ.

ಸೂ : [ಸರ್ವವೂ ಪರಮಾತ್ಮನೆ. ಜೀವಿಯು ಕೇವಲ ನಿಮಿತ್ತಮಾತ್ರನು. ಪ್ರೇರಕನೂ ದೇವದೇವನೆ ಎಂಬ ಭಾವ]

## ಹರಿಕಥಾಮೃತ ಶ್ಲೋಕಗಳು

೧ ರಾಗ–ಕಲ್ಯಾಣಿ

**ಮಲಗಿ ಪರಮಾದರದಿ ಪಾಡಲು**
**ಕುಳಿತುಕೇಳುವ ಕುಳಿತು ಪಾಡಲು**
**ನಿಲುವ ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬ ।**
**ಸುಲಭನೋ ಹರಿ ತನ್ನವರನರ–**
**ಘಳಿಗೆ ಬಿಟ್ಟಗಲನು ರಮಾಧವ-**
**ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ॥೫॥**

ಸ. ಅ :- ಸತ್ಪಾತ್ರನಾದ ಭಕ್ತನು ತನ್ನ ಉಪಾಸನಾಮೂರ್ತಿಯನ್ನು ಭಾವಿಸಲು ದೇಶ ಕಾಲಗಳ ಪರಿಸ್ತರಣವಾಗಲಿ ನೀತಿ–ನಿಯಮುಗಳ ನಿರ್ಬಂಧವಾಗಲಿ, ಸ್ಥಿತಿ–ಗತಿಗಳ ತೊಡಕಾಗಲಿ ಅಡ್ಡವಾಗದು. ಮನಸ್ಸನ್ನು ಸ್ಥಿರೀಕರಿಸಿ ಕೊಂಡು ಪರಮಾತ್ಮನ ಅನಂತ ಕಲ್ಯಾಣಗುಣಗಳನ್ನು ಮನನ ಮಾಡುತ್ತ ಆತನು ಮಲಗಿಕೊಂಡು ಹಾಡಿದರೆ ದೇವನು ಕುಳಿತು ಆಲಿಸುವನು; ಕುಳಿತರೆ ನಿಂತೂ; ನಿಂತಲ್ಲಿ ನಲಿಯುತ್ತಲೂ; (ಯಾವ ವಿಧವಾದ ವಿಕಾರಕ್ಕೂ ಒಳ ಗಾಗದೆ; ನೃತ್ಯಮಾಡುತ್ತ ಹಾಡಿದಲ್ಲಿ ಪ್ರತ್ಯಕ್ಷನಾಗುತ್ತೇನೆ ಎಂಬ ಭರವಸೆ ಯನ್ನೂ ಕೊಡುವನು. ಹರಿಯು ಹೀಗೆ ಸರ್ವಸುಲಭನು. ಅವನು ತನ್ನ ವರನ್ನು ನಿಮೇಷಕಾಲವೂ ಅಗಲಿರನು. (ಕರುಣಾನಿಧಿಯಾದ, ಲಕ್ಷ್ಮೀಪತಿ ಯನ್ನು ಪ್ರಸನ್ನೀಕರಿಕೊಳ್ಳಲು ತಿಳಿಯದೆ ಅಸಂಸ್ಕಾರಿಗಳು ಈ ಸಂಸಾರದಲ್ಲಿ ಸಿಲುಕಿ ಆಯಾಸಗೊಳ್ಳುವರು.

ವಿ. ವಿ: 'ಯಃ ಸ್ವಪಿತಾತುಶಯನೇ ಹರಿಂ ಚಿಂತಯತೇನರಃ ।
ಸ ಹರಿಃ ಕೀರ್ತನಂತಸ್ಯ ಸಂತಿಷ್ಠ್ಯ ಶ್ರುಣುತೇ ಮುದಾ ॥ ಎಂದು ಮೊದಲಾಗಿ
ಯಃಪುರ್ಮಾ ನೃತ್ಯಮಾನಸ್ಸ- ವಿಲಜ್ಜೋ ಗೀಯತೇಯರ್ದಿ ।
ಸ ಹರಿಃ ಪರಮಪ್ರೀತೋ ಪ್ರತ್ಯಕ್ಷೋ ಭವತಿ ಧ್ರುವಮ್ ॥ ಎಂದು ಬೃಹನ್ನಾರ ದೀಯ ಪುರಾಣದಲ್ಲಿ ಹೇಳಲಾಗಿರುವ ವಿಷಯವನ್ನೇ ಶ್ರೀ ಜಗನ್ನಾಥದಾಸರು ಮಲಗಿ ಪರಮಾದರದಿ ಎಂಬ ಈ ಪದ್ಯದಲ್ಲಿ ವಿವರಿಸಿದ್ದಾರೆ.

ಆಸೀನಃ ಪರ್ಯಟನ್ನಶ್ನನ್ ಶಯಾನಃ ಪ್ರಪಿಬನ್ ಬ್ರುವನ್ ।
ನಾನು ಸಂಧತ್ತ ಏಕಾನಿ-ಗೋವಿಂದ ಪರಿರಂಭಿತಃ [ಭಾಗ ೭-೪-೩೭]

ಹೀಗೆ ಪ್ರಹ್ಲಾದನು ಕುಳಿತಿರುತ್ತ, ಸಂಚರಿಸುತ್ತ, ಮಲಗಿರುತ್ತ, ಕುಡಿಯುತ್ತ, ಮಾತನಾ ಡುತ್ತ ಇದ್ದರೂ ಗೋವಿಂದನಿಂದ ಸುತ್ತುವರಿಯಲ್ಪಟ್ಟವನಾಗಿ (ಆತನ ಸ್ಮರಣೆಯಲ್ಲೇ ಲೀನನಾಗಿ) ಒಂದನ್ನೂ ಅರಿತವನಾಗಿರಲಿಲ್ಲ ಎಂಬ ವಿವರಣೆಯು ಭಕ್ತನ ಚಿತ್ತವೃತ್ತಿಗೆ ಕನ್ನಡಿ ಹಿಡಿದಂತಿದೆ. ಈ ಸ್ಥಿತಿಯಲ್ಲಿರುವವನು ಮಲಗಿ ಎಂದರೆ ಬಾಹ್ಯಜಗತ್ತಿಗೆ ಸಂಬಂಧಿಸಿದಂತೆ ಚಲನ ವಲನಾದಿಗಳಿಗೆಲ್ಲ ವಿರಾಮವಿತ್ತು ವಿಶ್ರಾಂತನಾಗಿರುವುದು ಎಂಬ ಭಾವ.

ಪಾಡಲು :- 'ಮದ್ಭಕ್ತಾ ಯತ್ರ ಗಾಯನ್ತಿ ತತ್ರ ತಿಷ್ಠಾಮಿ ನಾರದ' ಎಂಬುದು ಭಗವಂತನ ಉಕ್ತಿ. ದೇವನು ಸಂಗೀತಪ್ರಿಯನು. ಆದುದರಿಂದಲೇ ಹರಿಕೀರ್ತನೆಗಳನ್ನು ಹಾಡ ಬೇಕೆಂದು ದಾಸರು ಹೇಳಿರುವುದು.

ಸುಲಭನೋ ಹರಿ :-ಕರ್ಮಾಚರಣೆಗೆ ಹೇಳಿರುವ ವಿಧಿ-ನಿಷೇಧಗಳಾಗಲಿ. ಯೋಗಿಗಳು ಕೈಗೊಳ್ಳುವ-ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಅಷ್ಟಾಂಗ ಕ್ರಮಸಾಧನೆಗಳಿಗಾಗಲಿ ಸಿಲುಕದೆ.

ಅನನ್ಯಾಶ್ಚಿಂತಯಂತೋ ಮಾಂ-ಯೇಜನಾಃ ಪರ್ಯುಪಾಸತೇ-
ತೇಷಾಂನಿತ್ಯಾಭಿಯುಕ್ತಾನಾಂ-ಯೋಗಕ್ಷೇಮಂವಹಾಮ್ಯಹಮ್ ॥'

ಎಂದು ಭಗವಂತನು ಇತ್ತಿರುವ ಭರವಸೆಯನ್ನು ನಂಬಿ ಆತನ ಗುಣಗಳನ್ನು ಗಾನ

ಮಾಡುತ್ತ ಹರಿಕೃಪೆಗೆ ಪಾತ್ರರಾಗಬಹುದೆಂಬುದೇ ದಾಸರು ಸೂಚಿಸಿರುವ ಸುಲಭ ಮಾರ್ಗ.

೨ ರಾಗ–ಭೈರವಿ ತಾಳ–ಮಿ. ಛಾ.

**ಶ್ರವಣಮನಕಾನಂದವೀವುದು**
**ಭವಜನಿತ ದುಃಖಗಳ ಕಳೆವುದು**
**ವಿವಿಧ ಭೋಗಗಳಿಹಪರಂಗಳಲಿತ್ತು ಸಲಹುವುದು ।**
**ಭುವನ ಪಾವನವೆನಿಪ ಲಕುಮೀ–**
**ಧವನ ಮಂಗಳ ಕಥೆಯ ಪರಮೋ–**
**ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ॥೧॥**

ಸ. ಅ :- (ಭಗವಂತನಿಗೆ ಸಂಬಂಧಪಟ್ಟ ವೃತ್ತಾಂತಗಳ) ಕೇಳುವಿಕೆಯು ಮನಸ್ಸಿಗೆ ಸಂತೋಷವನ್ನುಂಟುಮಾಡುವುದು. ಈ ಸಂಸಾರ ಕ್ಲೇಶದಲ್ಲಿ ಉತ್ಪನ್ನವಾದ ವ್ಯಸನಗಳನ್ನು ಹೋಗಲಾಡಿಸುವುದು. ಈ ಲೋಕದಲ್ಲೂ (ಬದುಕಿದ್ದಾಗಲೂ), ಪರಲೋಕದಲ್ಲೂ (ಮರಣಾನಂತರದಲ್ಲೂ) ನಾನಾಸುಖಗಳನ್ನು ಕೊಟ್ಟು ಕಾಪಾಡುವುದು. ಆದುದರಿಂದ) ಈ ಲೋಕವನ್ನು ಶುದ್ಧಿಗೊಳಿಸ ತಕ್ಕ ಲಕ್ಷ್ಮೀಪತಿಯ ಮಂಗಳಕರವಾದ ವೃತ್ತಾಂತವನ್ನು ಪ್ರತಿದಿನದಲ್ಲೂ (ತಪ್ಪದೆ) ಬ್ರಾಹ್ಮಣರುಗಳು ಅತ್ಯಂತ ಉತ್ಸಾಹದಿಂದ ಕಿವಿಗೊಟ್ಟು (ಆಸಕ್ತಿವಹಿಸಿ) ಕೇಳುವುದು.

ವಿ. ವಿ :- 'ಶ್ರವಣಂ ಕೀರ್ತನಂ ವಿಷ್ಣೋಃ' ಎಂದು ಮೊದಲಾದ ನವವಿಧ ಭಕ್ತಿಮಾರ್ಗಗಳಲ್ಲಿ ಹರಿಕಥಾಶ್ರವಣವೇ ಆ ಪಂಥೀಯರಿಗೆ ಮೊದಲನೆಯ ಮೆಟ್ಟಲು. ಆದರೆ ಆ ಶ್ರವಣವು ಬಲಗಿವಿಯಲ್ಲಿ ಕೇಳಿ ಎಡಗಿವಿಯಲ್ಲಿ ವಿಸರ್ಜಿಸುವಂತಾಗದೆ ಸಾರವನ್ನು ಮನಸ್ಸಿನಲ್ಲಿ ದೃಢೀಕರಿಸಿಕೊಂಡು ವಿವೇಚಿಸುವುದರಿಂದ ಮಾತ್ರ ಜ್ಞಾನಾರ್ಜನೆಗೆ ಸುಮಾರ್ಗವೇರ್ಪಟ್ಟೀತು. ಮನಸ್ಸಿನ ಚಾಂಚಲ್ಯವು ತಪ್ಪಿ, ಸುಖ ದುಃಖಾನುಭವಗಳಲ್ಲಿ ವಿಚಲಿತವಾಗದೆ, ಪರಮಾತ್ಮನ ಧ್ಯಾನದ ಕಡೆಗೆ ಒಲಿದೀತು ಪರಮಕರುಣಾಮೂರ್ತಿಯಾದ ಪರಮಾತ್ಮನ ಅನಂತಾನಂತ ಚರ್ಯೆಗಳನ್ನು ಆಲಿಸುವಾಗ ಆಯಾ ಚರ್ಯೆಗಳಿಗೆ ವಿಷಯಿಗಳಾದ ಮಹಾತ್ಮಗುರುಗಳ ಹಿರಿತನವು ಬೋಧವಾಗಿ ನಮಗೆ ಉತ್ತಮ ಸಂಸ್ಕಾರವು ದೊರಕೀತು. ಆದುದರಿಂದಲೇ–

**ತದೈವ ಸತ್ಯಂ ತದೈವ ಮಂಗಳಂ-ತದೈವ ಪುಣ್ಯಂ ಭಗವದ್ಗುಣೋದಯಂ ।**
**ತದೈವ ರಮ್ಯಂ ರುಚಿರಂ ನವಂ ನವಂ–ತದೈವ ಶಾಸ್ತ್ರಂ ಗುಣತೋ ಮಹೋತ್ಸವಃ ।**
**ತದೈವ ಶೋಕಾರ್ಣವಶೋಷಣಂ ನೃಣಾಂ-ಯದುತ್ತಮಶ್ಲೋಕ-ಗುಣಾನುವರ್ಣನಮ್ ।**

ಎಂದು ಉತ್ತಮಶ್ಲೋಕರ ಗುಣ ಮಾಹಾತ್ಮ್ಯವು ಭಾಗವತ ದಶಮಸ್ಕಂಧದಲ್ಲಿ ಹೇಳಲ್ಪಟ್ಟಿದೆ. ಈ ಮಾರ್ಗಾನುಸರಣೆಯಿಂದ ಲೌಕಿಕ ಸೌಖ್ಯವೂ ದೊರಕಿ, ಭಗವಂತನ

ಕೃಪೆಗೆ ಪಾತ್ರತೆಯುಂಟಾಗಿ ಪರಲೋಕ ಸೌಖ್ಯವೂ (ಮೋಕ್ಷಾದಿಗಳು) ದೊರಕೊಳ್ಳುವುದು.

ಶ್ರವಣ = ಕೇಳುವುದು; ಭವ = ಜನನ - ಜರಾ - ಮರಣಾದಿ ಲೌಕಿಕ ಉಪಹತಿಗಳು; ಲಕುಮೀಧವ = ಲಕ್ಷ್ಮೀದೇವಿಯ ಗಂಡ; (ಪರಮ + ಉತ್ಸವ) ಅತ್ಯಂತ ಹರ್ಷ; ಭೂಸುರರು = ಬ್ರಾಹ್ಮಣರು. ಜನ್ಮನಾ ಜಾಯತೇ ಶೂದ್ರಃಸಂಸ್ಕಾರೇದ್ವಿಜ ಉಚ್ಯತೇ।
ವಿದ್ಯಯಾ ಯಾತಿ ವಿಪ್ರತ್ವಂ ತ್ರಿಭಿಃಶ್ರೋತ್ರಿಯ ಉಚ್ಯತೇ ॥

ಎಂದಿರುವಂತೆ ಜನ್ಮತಃ ಶೂದ್ರನೆನಿಸಿಕೊಂಡರೂ ಉಚಿತ ಸಂಸ್ಕಾರಗಳಿಂದ ದ್ವಿಜತ್ವವೂ ಒಳ್ಳೆಯ ವಿದ್ಯಾರ್ಜನೆಯಿಂದ ವಿಪ್ರತ್ವವೂ ಇವೆಲ್ಲ ಏಕತ್ರ ಸಮ್ಮಿಳಿತವಾದಾಗ ಶ್ರೋತ್ರಿಯತ್ವವೂ ಆದೀತೆಂದು ಅರಿಯಬೇಕು.

**ಶ್ರೀ ಲಕುಮಿವಲ್ಲಭಗೆ ಸಮ ಕರು–**
**ಣಾಳುಗಳ ನಾ ಕಾಣೆನೆಲ್ಲಿ ಕು–**
**ಚೇಲನವಲಿಗೆ ಮೆಚ್ಚಿಕೊಟ್ಟನು ಸಕಲಸಂಪದವ ।**
**ಕೇಳಿದಾಕ್ಷಣ ವಸ್ತ್ರಗಳ ಪಾಂ**
**ಚಾಲಿಗಿತ್ತನು ದೈತ್ಯನುದರವ**
**ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ ॥೧॥**

ಸ. ಅ :- ಸಂಪದ್ಯುಕ್ತಳಾದ ಲಕ್ಷ್ಮೀದೇವಿಯ ಗಂಡನಿಗೆ (ಶ್ರೀಮನ್ನಾರಾಯಣನಿಗೆ) ಸಾಟಿಯಾಗಬಲ್ಲ ಕೃಪಾಶಾಲಿಗಳನ್ನು ಎಲ್ಲಿಲ್ಲೂ ನಾನು ಕಾಣೆನು. ಕುಚೇಲನೆಂಬುವನು ಕೊಟ್ಟ ಅವಲಕ್ಕಿಗೆ ಸಕಲ ಸಂಪತ್ತನ್ನೂ ಅನುಗ್ರಹಿಸಿದನು. ತಾನು ಪ್ರಾರ್ಥಿಸಿಕೊಂಡ ಒಡನೆಯೇ ಪಾಂಚಾಲಿಗೆ (ದ್ರೌಪದೀ ದೇವಿಗೆ) ಬಟ್ಟೆಗಳನ್ನು ಕೊಟ್ಟನು. ರಾಕ್ಷಸನ (ಹಿರಣ್ಯ ಕಶಿಪುವಿನ) ಹೊಟ್ಟೆಯನ್ನು ಹೋಳು ಮಾಡಿ (ಬಗೆದು) ಸಂಹರಿಸಿ ಕೃಪಾಪೂರ್ಣನಾದ ಹರಿಯು ಪ್ರಹ್ಲಾದನನ್ನು ಸಂತೈಸಿದನು.

ಶ. ವಿ :- (ಲಕುಮಿ - ವಲ್ಲಭ) = ಲಕ್ಷ್ಮಿಯಪತಿ. ಕುಚೇಲ = ಕುತ್ಸಿತವಾದ ಬಟ್ಟೆ (ಹರಕುಬಟ್ಟೆ) ಪಾಂಚಾಲಿ-ಪಾಂಚಾಲರಾಜನ (ದ್ರುಪದನ) ಮಗಳು, ದ್ರೌಪದಿ.

ಅವಲಿಗೆ ಮೆಚ್ಚಿಕೊಟ್ಟನು ಸಕಲಸಂಪದವ :- ಕುಚೇಲ ಇವನಿಗೆ ಸುದಾಮಾ, ಶ್ರೀದಾಮ ಎಂಬ ಹೆಸರೂ ಉಂಟು. ಬಾಲ್ಯದಲ್ಲಿ ಇವನು ಬಲರಾಮ ಶ್ರೀಕೃಷ್ಣರೊಂದಿಗೆ ಸಾಂದೀಪಿನಿ ಎಂಬ ಬ್ರಾಹ್ಮಣನಲ್ಲಿ ಗುರುಕುಲವಾಸ ಮಾಡುತ್ತಿದ್ದನು. ಕಾಲಕ್ರಮದಲ್ಲಿ ಈ ಬ್ರಾಹ್ಮಣನು ಗೃಹಸ್ಥಾಶ್ರಮಿಯಾಗಿ, ಬಹುಪುತ್ರವಂತನಾಗಿ, ಕಡುಬಡತನವನ್ನು ತಾಳಲಾಗದೆ ಪತ್ನಿಯ ಒತ್ತಾಯದಿಂದ ತನ್ನ ಸಹಪಾಠಿಯಾಗಿದ್ದ ಕೃಷ್ಣನಲ್ಲಿಗೆ ಬಂದನು. ಬಂದ ಮಿತ್ರನನ್ನು ಗೌರವಿಸಿ ತನ್ನ ಪತ್ನಿಯರೊಂದಿಗೆ ಬಹುವಾಗಿ ಉಪಚರಿಸಿ ಶ್ರೀಕೃಷ್ಣನು ಮಿತ್ರನು ತನ್ನ ಹರಕು ಬಟ್ಟೆಯಲ್ಲಿ ಕಟ್ಟಿಕೊಂಡು ಅತ್ಯಂತ ಪ್ರೀತಿಯಿಂದ ತಂದುಕೊಟ್ಟ ಅವಲಕ್ಕಿಯನ್ನು ತಿಂದು ತೃಪ್ತನಾಗಿ ಅಪಾರ ಐಶ್ವರ್ಯವನ್ನು ಕರುಣಿಸಿ ಕಳುಹಿಸಿಕೊಟ್ಟನು. ತನ್ನ ದಾರಿದ್ರ್ಯದ ಪರಿಸ್ಥಿತಿಯನ್ನು ಮಿತ್ರನಲ್ಲಿ ಹೇಳಿಕೊಳ್ಳಬೇಕೆಂದು ಬಂದಿದ್ದ ಕುಚೇಲನು ಹೇಳಿಕೊಳ್ಳಲಾರದೆ ವ್ಯಥೆಯಿಂದ ಹಿಂದಿರುಗಿದರೂ

ಸರ್ವಾಂತರ್ಯಾಮಿಯಾದ ಶ್ರೀಕೃಷ್ಣನು ಅವನ ಮನೋಗತವನ್ನು ಅರಿತು ಅವನಿಗೆ ಸಕಲೈಶ್ವರ್ಯವನ್ನೂ ಕರುಣಿಸಿದುದನ್ನು ಕಂಡು ಪರಮಾನಂದಭರಿತನಾಗಿ ಆತನ ಮಹಿಮೆಯನ್ನು ಕೊಂಡಾಡಿಕೊಂಡು ಕಾಲಕ್ರಮದಲ್ಲಿ ಉತ್ತಮಪದವಿಪಡೆದನು. [ಭಾಗ ೧೦-೮೦]

ಕೇಳಿದಾಕ್ಷಣ ವಸ್ತ್ರಗಳ ಪಾಂಚಾಲಿಗಿತ್ತನು: ಪಾಂಚಾಲಿಯು ಪಾಂಡವರ ಪತ್ನಿ. ಜೂಜಿನಲ್ಲಿ ಧರ್ಮರಾಜನು ಸರ್ವಸ್ವವನ್ನೂ ದುರ್ಯೋಧನನಿಗೆ ಸೋತನು. ಆಗ ದುರ್ಯೋಧನನು ತನ್ನ ತಮ್ಮ ದುಶ್ಶಾಸನನ ಮೂಲಕ ಪಾಂಚಾಲಿಯನ್ನು ಸಭೆಗೆ ಎಳೆತರಿಸಿ, ಮಾನಭಂಗ ಮಾಡಿಸಲು ಆಕೆಯ ಸೀರೆಯನ್ನು ಎಳೆದು ಹಾಕುವಂತೆ ಅಜ್ಞೆ ಮಾಡಿದನು. ಪರಮ ಭಕ್ತಳಾದ ಆಕೆಯು ಕೃಷ್ಣನನ್ನು ದೃಢ ಮನಸ್ಸಿನಿಂದ ಪ್ರಾರ್ಥಿಸಿದ ಕೂಡಲೇ ಆಕೆಯ ಮೈಮೇಲಿನ ವಸ್ತ್ರಗಳು ಅಕ್ಷಯವಾಗಲೆಂದು ಉಸುರಲು ಸೀರೆ ಸೆಳೆಯುತ್ತಿದ್ದ ದುಶ್ಶಾಸನನ ಕೈಗಳು ಸೋತುವೆವಿನಾ ಪಾಂಚಾಲಿಯು ವಿವಸ್ತ್ರಳಾಗಲಿಲ್ಲ. ಹೀಗೆ ಆಕೆಯ ಮಾನ ಸಂರಕ್ಷಣೆಯನ್ನು ಮಾಡಿದನು ಪರಮಾತ್ಮ.

ದೈತ್ಯನುದರವಸೀಳಿ ಸಂತೈಸಿದನು ಪ್ರಹ್ಲಾದನ: ಬ್ರಹ್ಮನ ಶಾಪದಿಂದ ದೈತ್ಯ ಯೋನಿಯಲ್ಲಿ ಜನಿಸಿದ್ಧ ಕರ್ಮಜ ದೇವತೆಯಾದ ಪ್ರಹ್ಲಾದನಿಗೆ ಆತನ ತಂದೆ ಹಿರಣ್ಯಕಶಿಪುವಿನಿಂದ ಒದಗುತ್ತಿದ್ದ ಹಿಂಸೆಯನ್ನು (ಹರಿಭಕ್ತಿಗೆ ಮಾಡುತ್ತಿದ್ದ ವಿಘ್ನವನ್ನು) ತಪ್ಪಿಸಲು ನೃಸಿಂಹನಾಗಿ ಅವತರಿಸಿ ದೈತ್ಯನ ಉದರವನ್ನು ಸೀಳಿ ಕೊಂದು ಪ್ರಹ್ಲಾದನ ಭಕ್ತಿಗೆ ಮೆಚ್ಚಿ ಅನುಗ್ರಹಿಸಿದನು. ಹೀಗೆ ಪರಮ ಕರುಣಾಶಾಲಿಯು ಲಕ್ಷ್ಮೀಪತಿಯು.

ಸೂ: ಕುಚೇಲನು ಅನೇಕ ಜನ್ಮಗಳಿಂದ ದಾರಿದ್ರ ದುಃಖವನ್ನು ಅನುಭವಿಸಿ ಆತನ ಸಾಧನ ಪೂರ್ತಿಯಾದುದನ್ನು ತಿಳಿದೇ ಆತನು ಕೊಟ್ಟ ಒಪ್ಪಿಡಿ ಅವಲಕ್ಕಿಗೆ ತೃಪ್ತನಾಗಿ ಅವನಿಗೆ ಇಹ-ಪರ ಸೌಖ್ಯವನ್ನು ಹರಿಯು ಕರುಣಿಸಿದನು.

೨ ದ್ರೌಪದಿಯು ಮುಖ್ಯ ಪ್ರಾಣನ ನಿಯತ ಪತ್ನಿ ಭಾರತೀದೇವಿ. ಬ್ರಹ್ಮನ ಶಾಪದಿಂದ ಶಚಿ-ಶ್ಯಾಮಲಾ ಮತ್ತು ಉಷಾದೇವಿಯನು ತನ್ನಲ್ಲಿ ಆವಾಹಿತರಾಗಿದ್ದುದರಿಂದ ಅವರುಗಳ ಮಾನರಕ್ಷಣೆಗಾಗಿಯೇ ಆಕೆಯು ಶ್ರೀಕೃಷ್ಣನಲ್ಲಿ ಮೊರೆಯಿಟ್ಟು ಅಕ್ಷಯವಸ್ತ್ರ ವರವನ್ನು ಪಡೆದಳು. ಆಕೆಯು ನಿರ್ಲಿಪ್ತಳು.

೩ ಭಕ್ತ ಪ್ರಹ್ಲಾದನಿಗೆ ಬ್ರಹ್ಮನು ಐದು ದೈತ್ಯಯೋನಿ ಎಂದು ಶಾಪವಿತ್ತುದರಿಂದ ಈತನಿಗೆ ತಂದೆ ದೈತ್ಯನಿಂದ ಸ್ವಲ್ಪಕಾಲ ಹರಿಭಕ್ತಿಗೆ ತಡೆಯೊದಗಿದ್ದಿತು. ಈ ರಹಸ್ಯಗಳು ಈ ಮೇಲೆ ವಿವರಿಸಿರುವ ಕಥಾ ಸಂದರ್ಭಗಳ ಹಿನ್ನೆಲೆ ಎಂಬ ವಿವರಣೆ ಉಂಟು.

## ಹನ್ನೊಂದನೆಯ ಸಂಧಿ

ನಿನ್ನ ಸರ್ವತ್ರದಲಿ ನೆನೆವವ
ರನ್ಯಕರ್ಮವ ಮಾಡಿದರು ಸರಿ
ಪುಣ್ಯಕರ್ಮಗಳೆನಿಸುವುವು ಸಂದೇಹವಿನಿತಿಲ್ಲ।
ನಿನ್ನ ಸ್ಮರಿಸದೆ ಸ್ನಾನಜಪಹೋ
ಮಾನ್ನವಸ್ತ್ರ ಗಜಾಶ್ವಭೂಧನ
ಧಾನ್ಯ ಮೊದಲಾದಖಿಳದಾನವ ಮಾಡಿ ಫಲವೇನು ||೮||

ಸ. ಅ :- ಎಲ್ಲದರಲ್ಲೂ (ಅಣು ರೇಣುತೃಣ ಕಾಷ್ಠಾದಿ ಸರ್ವವಸ್ತುವಿನಲ್ಲೂ) ನಿನ್ನನ್ನು ನೆನೆಸಿಕೊಳ್ಳುವವರು ಬೇರೆ ಕರ್ಮಗಳನ್ನು (ನಿಷೇಧಿತ ಕರ್ಮಗಳನ್ನು) ಮಾಡಿದರೂ ಅವು ಒಳ್ಳೆಯ ಕರ್ಮಗಳೆಂದೇ ಗಣಿಸಲ್ಪಡುವುವು. ಈ ಭಾವನೆಗೆ ಸಂಶಯವೇ ಇಲ್ಲ. ನಿನ್ನ ಸ್ಮರಣೆಯಿಲ್ಲದೆ ಮಾಡುವ ಸ್ನಾನ, ಜಪ, ಹೋಮ, ಅನ್ನ-ವಸ್ತ್ರ, ಆನೆ, ಕುದುರೆ, ಭೂಮಿ, ಐಶ್ವರ್ಯ (ಹಣ) ದವಸವೇ ಮೊದಲಾದ ಎಲ್ಲ ದಾನಗಳನ್ನು ಮಾಡಿದರೂ ಏನು ಪ್ರಯೋಜನ?

[ನಿಷ್ಪ್ರಯೋಜನವೆಂದು ಭಾವ]

ವಿ. ವಿ :- ಸ್ನಾನಗಳು ದಶವಿಧವೆಂದು ಆಚಾರಶೀಲರು ಹೇಳುವರು

೧. ಮೃತ್ತಿಕಾಸ್ನಾನ (ತುಲಸೀ ಮೃತ್ತಿಕೆಯನ್ನು ಸರ್ವಾಂಗಕ್ಕೂ ಲೇಪಿಸಿಕೊಂಡು ಸ್ನಾನಮಾಡುವುದು)

೨. ಉಷ್ಣೋದಕ (ಬಿಸಿನೀರಿನ ಸ್ನಾನ)

೩. ಕಂಠ (ಕುತ್ತಿಗೆಯವರಿಗೆ ಮಾತ್ರ ನೀರಿನಲ್ಲಿ ನಿಂತು) ಸ್ನಾನ ಮಾಡುವುದು

೪. ಕಟಿಸ್ನಾನ (ಸೊಂಟಮಟ್ಟದವರಿಗೆ ಮಾತ್ರ ಸ್ನಾನ)

೫. ಮಂತ್ರಸ್ನಾನ-ಸ್ನಾನಮಾಡಲು ಶಕ್ತಿ ಇಲ್ಲದವರು, ಅಪವಿತ್ರಃ ಪವಿತ್ರೋವಾ-ಶ್ಶುಚಿಃ ॥ ಇತ್ಯಾದಿ ಮಂತ್ರದಿಂದ ಪ್ರೋಕ್ಷಿಸಿಕೊಳ್ಳುವುದು.

೬. ಭಸ್ಮಸ್ನಾನ-ಶ್ರೌತಾಗ್ನಿ ಇಲ್ಲವೆ ಸ್ಮಾರ್ತಾಗ್ನಿಯ ಭಸ್ಮ ಲೇಪಿಸಿಕೊಂಡು ಸ್ನಾನ ಮಾಡುವುದು. ಇದನ್ನು ಆಗ್ನೇಯ ಸ್ನಾನವೆಂದೂ ಕರೆಯುವರು.

೭. ಮಾನಸಿಕ ಸ್ನಾನ-ಮನಸ್ಸಿನಲ್ಲೇ ಗಂಗಾದಿ ತನ್ನ ಉದ್ದಿಷ್ಟನದಿಯನ್ನು ಸ್ಮರಿಸಿಕೊಳ್ಳುತ್ತ ನೀರನ್ನು ಪ್ರೋಕ್ಷಿಸಿಕೊಳ್ಳುವುದು.

೮. ಗಾಯತ್ರೀ ಸ್ನಾನ ಕೈಲಿ ಜಲಹಿಡಿದು ಗಾಯತ್ರಿಮಂತ್ರಪದ ಸ್ಮರಣ ಮಾಡುತ್ತ (೧೦ ಸಲವಾದರೂ) ಪ್ರೋಕ್ಷಿಸಿಕೊಳ್ಳುವುದು.

ವಾಯವ್ಯ ಸ್ನಾನ ಗೋಧೂಳಿಯಲ್ಲಿ ಓಡುತ್ತ ಮಾಡುವ ಸ್ನಾನ.

೧೦. ದಿವ್ಯಸ್ನಾನ ಉತ್ತರಾಯನ ಕಾಲದಲ್ಲಿ ಬಿಸಿಲು-ಮಳೆ ಜತೆಯಲ್ಲಿ ಬೀಳುವಾಗ ಅದರಲ್ಲಿ ನೆನೆವುದು. ಇದಲ್ಲದೆ-ಗೋಪೀಚಂದನದಿಂದ ಲೇಪಿಸಿಕೊಂಡು ಮಾಡುವ ಸ್ನಾನವು ಪಾರ್ಥಿವ ಸ್ನಾನವೆನ್ನಲ್ಪಡುವುದು.

ಸರ್ವತ್ರದಲಿ ಎಲ್ಲೆಲ್ಲೂ; (ಹೋಮ, ಅನ್ನ-ವಸ್ತ್ರ) (ಗಜ + ಅಶ್ವ) (ಭೂ + ಧನ)

ಧರ್ಮೋಭವತ್ಯಧರ್ಮೋಽಪಿ ಕೃತೋಭಕ್ತೈಸ್ತವಾಚ್ಯುತ ।
ಪಾಪಂಭವತಿ ಧರ್ಮೋಽಪಿ ಯೋನಭಕ್ತೈಃಕೃತೋಹರೇಃ [ಗೀತಾ]

ಎಂದರೆ ದೇವಾದಿ ದೇವನೇ, ಭಕ್ತರು ಸರ್ವತ್ರ ನಿನ್ನನ್ನೇ ಸ್ಮರಿಸುತ್ತ ನಿಷಿದ್ಧ ಕಾರ್ಯವನ್ನಾಚರಿಸಿದರೂ ಅವರು ಮಾಡುವ ಪಾಪಕರ್ಮವೂ ಪುಣ್ಯಫಲದಾಯಕವೆ ಆಗುತ್ತದೆ ಎಂದಿದೆ.

'ಸಕಲವೆಲ್ಲವು ಹರಿಯಸೇವೆ ಎನ್ನಿ ರುಕ್ಮಿಣೀ ಅರಸಗಲ್ಲದಿಲ್ಲವೆನ್ನಿ'

ಎಂಬ ದಾಸವಾಕ್ಯವೂ ಇದನ್ನೇ ಸಮರ್ಥಿಸಿದೆ.

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್
ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ॥
ಶುಭಾಶುಭ ಫಲೈರೇವಂ ಮೋಕ್ಷ್ಯಸೇ ಕರ್ಮ ಬಂಧನೈಃ

ಎಂಬ ಸಂಪೂರ್ಣ ಭಾವನೆಯಿಂದ ಪರಮಾತ್ಮನನ್ನೇ ನೆನೆಯುತ್ತ ಕರ್ಮಾರ್ಪಣೆ ಮಾಡಬೇಕು.

ಸೂ : ಪಂಚಾಗ್ನಿಗಳು : ದಕ್ಷಿಣ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯ-ಇವು.

**ವೇದಶಾಸ್ತ್ರ ಪುರಾಣಕಥೆಗಳ–**
**ನೋದಿ ಪೇಳಿದರೇನು ಸಕಲ ನಿ–**
**ಷೇಧಕರ್ಮವ ತೊರೆದು ಸತ್ಕರ್ಮಗಳ ಮಾಡೇನು**
**ಓದನಂಗಳ ಜರಿದು ಶ್ವಾಸ ನಿ-**
**ರೋಧಗೈಸಿದರೇನು ಕಾಮ–**
**ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು ||೧೬||**

ಸ. ಅ :. ಬಯಕೆ ಹಾಗೂ ಕೋಪ ಇವು ಹೋಗದೆ, ನಾನು ನನ್ನದು ಎಂಬ ಗರ್ವದಿಂದ ಬೀಗಿರುವ ಮಾನವನು-ವೇದ, ಶಾಸ್ತ್ರ, ಪುರಾಣಕಥೆಗಳನ್ನು ಓದುವುದರಿಂದಲಾಗಲೀ, ಅವನ್ನೇ ಆವರ್ತಿಸುವುದರಿಂದಲಾಗಲೀ, ವೇದ ಬಾಹಿರ ಕರ್ಮಗಳನ್ನು ಆಚರಿಸದೆ ಒಳ್ಳೆಯ (ವೇದವಿಹಿತ) ಕರ್ಮಗಳನ್ನೇ ಮಾಡುವುದರಿಂದಾಗಲೀ ಅನ್ನಾಹಾರಾದಿಗಳನ್ನು ಬಿಟ್ಟು ಉಸಿರನ್ನು (ಪ್ರಾಣಾಯಾಮಾದಿ ಕ್ರಮದಲ್ಲಿ) ಬಿಗಿಹಿಡಿದಿರುವುದರಿಂದಲಾಗಲಿ ಏನೊಂದು ಪ್ರಯೋಜನವೂ ಉಂಟಾಗದು.

ವಿ. ವಿ :- ವೇದ-ಋಗ್ವೇದ, ಯಜುರ್‌ವೇದ, ಸಾಮವೇದ, ಅಥರ್ವಣವೇದ ಈ ನಾಲ್ಕು.

ಶಾಸ್ತ್ರ :- ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಕಲ್ಪ ಇವಾರೂ ವೇದದ ಷಡಂಗಗಳು (ಶಾಸ್ತ್ರಗಳು.)

ಪುರಾಣಗಳು :- ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ-ಶೈವಂ ಭಾಗವತಂ ತಥಾ। ತಥಾನ್ಯ ನ್ನಾರದೀಯಾ ಚ ಮಾರ್ಕಂಡೇಯಂಚ ಸಪ್ತಮಂ। ಆಗ್ನೇಯ ಮಷ್ಟಕಂ ಪ್ರೋಕ್ತಂ ಭವಿಷ್ಯನ್ನವಮಂ ತಥಾ-ದಶಮಂ ಬ್ರಹ್ಮವೈವರ್ತಂ ಲಿಂಗಮೇಕಾದಶಂ ತಥಾ। ವಾರಾಹಂ ದ್ವಾದಶಂ ಪ್ರೋಕ್ತಂ ಸ್ಕಾಂದಂಚಾತ್ರ ತ್ರಯೋದಶಂ। ಚತುರ್ದಶಂವಾಮನಂಚ - ಕೌರ್ಮಂಪಂಚದಶಂ ತಥಾ ಮಾತ್ಸ್ಯಂಚ ಗಾರುಡಂಚೈವ ಬ್ರಾಹ್ಮಾಂಡಾಷ್ಟಾದಶಂ ತಥಾ ॥ ಈ ಹದಿನೆಂಟಲ್ಲದೆ ಸನತ್ಕುಮಾರಾದಿ ಹದಿನೆಂಟು ಉಪ ಪುರಾಣಗಳೂ ಮುನಿಗಳಿಂದಹೇಳಲ್ಪಟ್ಟಿವೆ.

ಸೂ : ಮಾನವನು ಕಾಮ - ಕ್ರೋಧಾದ್ಯರಿಷಡ್ವರ್ಗಗಳನ್ನು ಬಿಡದೆ, ನಾನು ನನ್ನದು ಎಂಬ ಅಹಂಕಾರ-ಮಮಕಾರಗಳಲ್ಲಿ ಸಿಕ್ಕಿಕೊಂಡು ವೇದ-ಶಾಸ್ತ್ರ-ಪುರಾಣಾದಿಗಳನ್ನು ಎಷ್ಟೇ ಓದಲಿ, ಕೇಳಲಿ-ಅದರಿಂದ ಕಿಂಚಿತ್ತೂ ಫಲದೊರಕದು. ಅವನು ಎಷ್ಟೇ ಸತ್ಕರ್ಮಗಳ ನ್ನಾಚರಿಸಿದರೂ. ನಿಷ್ಠೆ. ಅನ್ನಾಪ್ಯಾಹಾರಗಳನ್ನು ತ್ಯಜಿಸಿ ಯೋಗನಿಷ್ಠನಾಗಿದ್ದರೂ

ನಿಷ್ಪ್ರಯೋಜನ. ತಾನು ಮಾಡುವ ಸಮಸ್ತಕರ್ಮವೂ ಭಗವಂತನಿಂದ ಪ್ರೇರಿತವಾದುದು. ಅದರ ಫಲವೂ ಆತನದೆ, ನಾನು (ಜೀವನು) ಆತನ ನಿರ್ದೇಶನಕ್ಕೆ ಒಳಪಟ್ಟವನು ಎಂಬ ದೃಢನಂಬುಗೆಯಿಂದ ನಡೆದಾಗಲೆ ಸುಫಲವು ದೊರಕೀತು.

**ನಾನು ನನ್ನದು ಎಂಬ ಜಡಮತಿ–**
**ಮಾನವನು ದಿನದಿನದಿ ಮಾಡುವ**
**ಸ್ನಾನ ಜಪದೇವಾರ್ಚನೆಯು ಮೊದಲಾದ ಕರ್ಮಫಲ(ಗಳು)**
**ದಾನವರು ಸೆಳೆದೊಯ್ವರಲ್ಲದೆ**
**ಶ್ರೀನಿವಾಸನು ಸ್ವೀಕರಿಸ ಮ–**
**ದ್ದಾನೆ ಪಕ್ವ ಕಪಿತ್ಥಫಲ ಭಕ್ಷಿಸಿದವೊಲ್ ಅಹುದು ||೧೩||**

ಸ. ಅ :- ನಾನು ನನ್ನದು ಎಂದುಕೊಳ್ಳುವ ತಿಳಿಗೇಡಿಯಾದ ಮನುಷ್ಯನು ಪ್ರತಿದಿನದಲ್ಲೂ ತಾನು ಮಾಡುವ ಸ್ನಾನ, ಜಪ, ದೇವರ ಪೂಜೆ, ಇವೇ ಮೊದಲಾದ ಕಾರ್ಯಗಳಿಂದ ಲಭಿಸುವ ಫಲವನ್ನು ದೈತ್ಯರು ಅಪಹರಿಸಿಕೊಳ್ಳುವರಲ್ಲದೆ ಲಕ್ಷ್ಮೀಪತಿಯು ಒಪ್ಪಿಸಿಕೊಳ್ಳನು. (ಆ ಕರ್ಮವು) ಮದಿಸಿದ ಆನೆಯು ಕಳಿತ (ಉಂಡೆಯಾಗಿಯೆ) ಬೇಲದ ಹಣ್ಣನ್ನು ತಿಂದಂತೆ ಆಗುವುದು.

ವಿ. ವಿ: ಈ ಶರೀರವೇ ನಾನು ಎಂದುಕೊಳ್ಳುವುದು ಅಜ್ಞತೆ. ಏಕೆಂದರೆ ಇದರಲ್ಲಿ ಜೀವನಿಲ್ಲದಿದ್ದರೆ ದೇಹವು ಜಡವಲ್ಲವೆ? ಆದುದರಿಂದ ಕರ್ಮ ಮಾಡುವವನಿಗೆ ನಾನು ಎಂಬ ಗರ್ವವು ಸಲ್ಲದು. ಪ್ರೇರಕಶಕ್ತಿಯಾಗಿ ಅಂತರ್ಯಾಮಿಯು ಒಳಗಿದ್ದು ನಡೆಸುವುದರಿಂದ ಜೀವನು ಕ್ರಿಯೆಗೆ ತೊಡಗುವನು ಆದುದರಿಂದ 'ನಾಹಂಕರ್ತಾ ಹರಿಃ ಕರ್ತಾ' ಎಂಬ ದೃಢನಂಬುಗೆಯಿಂದ ಕರ್ಮಗಳನ್ನಾಚರಿಸುತ್ತ ಅವುಗಳಿಂದ ಒದಗುವ ಫಲಗಳನ್ನೂ ಆತನಿಗೆ ಅರ್ಪಿಸಬೇಕು. ಈ ಸಮರ್ಪಣಾಭಾವದಿಂದ ನಾನು, ನನ್ನದು ಎಂಬ ಗರ್ವವನ್ನು ತ್ಯಜಿಸಿ ಮಾಡದ ಯಾವ ಸತ್ಕರ್ಮದ ಫಲವೂ ಹರಿಗರ್ಪಿತವಾಗದು. ದುರ್ಬಲರಾದ ದೇವತೆಗಳ ಹೆಸರಿನಲ್ಲಿ ದೈತ್ಯರು ಕೊಂಡುಹೋಗುವರು. ಚೆನ್ನಾಗಿ ಕಳಿತ ಬೇಲದ ಉಂಡೆ ಹಣ್ಣಿನ ಒಳಗೆ ಮದ್ದಾನೆ ಎಂಬ ಹುಳುವು ಸೇರಿಕೊಂಡು–[ಅಹಂಭಾವದಂತೆ] ಅದರ ಸಾರವನ್ನೆಲ್ಲ ತಿಂದು ಆಕಾರವನ್ನು ಮಾತ್ರ ಹಾಗೆಯೆ ಬಿಟ್ಟಿರುವಂತೆ ವಿಷ್ಣುಭಕ್ತಿ ಇಲ್ಲದ ಕರ್ಮಗಳೆಲ್ಲ ವ್ಯರ್ಥವು. ನಿರರ್ಥಕವು.

ಜಡಮತಿ ಮಂದಬುದ್ಧಿ, ಅಜ್ಞ; ದಾನವರು ದೈತ್ಯರು; ಕಪಿತ್ಥಫಲ ಬೇಲದಹಣ್ಣು ಮದ್ದಾನೆ = ಮದಹಿಡಿದ ಆನೆ. ಅದು ಉಂಡೆಯಾದ ಬೇಲದ ಹಣ್ಣನ್ನೇ ನುಂಗಿ ಅದು ಉಂಡೆಯಾಗಿರುವಂತೆಯೆ ವಿಸರ್ಜಿಸುತ್ತದೆ. ಆ ಹಣ್ಣು ಒಳಗೆ ಪೊಳ್ಳು.

# ಶ್ರೀ ದೇವರಲ್ಲಿ ಪ್ರಾರ್ಥನೆ

೪೦ ರಾಗ–ಮಧ್ಯಮಾವತಿ ತಾಳ–ಆದಿ

ಪಲ್ಲವಿ :- ಎಂದಿಗೆ ನಿನ್ನ ಪಾದ ಕಾಂಬೆ ಸ್ವಾಮಿ–ಎಂದಿಗೆ ನಿನ್ನ ಪಾದಕಾಂಬೆ ||

ಅ. ಪ :- ಎಂದಿಗೆ ನಿನ್ನ ಪಾದ ಕಂಡೆ ಭಕುತಿಯಿಂದ | ಅಂದಿಗೆ ಭವಪಾಶ ತುಂಡೆ ಸ್ವಾಮಿ ||

ಚ. ೧ - ಇಂದಿರಾದೇವಿ ನಿನ್ನ ಪೊಂದಿದ ಕಾರಣ | ದಂದುಗವನು ಕಾಣಲಿಲ್ಲ ಸ್ವಾಮಿ ||೧||

೨ - ಬೊಮ್ಮನು ನಿನ್ನನು ಒಮ್ಮೆ ತುತಿಸಲು-ಮಮ್ಮಗ ಕುಣಿ– ಕುಣಿದಾಡುವ ಸ್ವಾಮಿ ||೨||

೩ - ನಿನ್ನನೆ ವಾಸುದೇವವಿಠಲ ತನ್ನ–ಮನದಿ ನೆನೆವುದ ಬಲ್ಲೆಲ್ಲಸ್ವಾಮಿ ||೩||

ಸ. ಅ :- ಹೇ ದೇವ ನಿನ್ನ ಪಾದವನ್ನು ಎಂದಿಗೆ ದರ್ಶನ ಮಾಡೇನು ? ಭಕ್ತಿಯಿಂದ ನಿನ್ನ ಪಾದವನ್ನು ಕಂಡುಂದೆ ಈ ಸಂಸಾರ ಬಂಧನವು ತುಂಡಾ ದೀತು, ದೇವ !

ಚ. ೧ - ಲಕ್ಷ್ಮೀದೇವಿಯು ನಿನ್ನನ್ನು ಸೇರಿರುವ ಕಾರಣ (ನನ್ನ) ಕಷ್ಟವು ನಿನಗೆ ಗೋಚರಿಸಲಿಲ್ಲವಷ್ಟೆ ?

೨ - ಬ್ರಹ್ಮನು ನಿನ್ನನ್ನು ಒಂದಾವರ್ತಿ ಸ್ತುತಿಸಿದರೂ ಮಮ್ಮಗನಾದ ರುದ್ರನು ನಾಟ್ಯವಾಡುವನಲ್ಲವೆ ! ಸ್ವಾಮಿ ?

೩ - ವಾಸುದೇವವಿಠಲಾಂಕಿತ ಭಕ್ತನಾದ ನಾನು ಮನಸ್ಸಿನಲ್ಲೇ [ಸ್ಮರಿಸುವುದನ್ನು (ಸರ್ವಾಂತರ್ಯಾಮಿಯಾದ) ನೀನೇ ಬಲ್ಲೆಯಲ್ಲವೆ ದೇವನೆ ?

ವಿ. ವಿ :- ಭವ ಪಾಶ = ಸಂಸಾರವೆಂಬ ಬಂಧನ; ಬೊಮ್ಮ = ಬ್ರಹ್ಮ (ಈತನು ವಿಷ್ಣುವಿನ ಮಗ) ಮಮ್ಮಗ ರುದ್ರ (ಈತನು ಬ್ರಹ್ಮನ ಮಗ, ಆದುದರಿಂದ ಮಮ್ಮಗ)

ವಾಸುದೇವವಿಠಲ : ರಾಯಚೂರು ತಾಲ್ಲೂಕು ದಿನ್ನಿಗ್ರಾಮದಲ್ಲಿದ್ದ ಶ್ರೀ ಜನಾರ್ದನಾಚಾರ್ಯರೆಂಬ ಜೋಯಿಸರ ಮಗ ಶ್ರೀ ವೆಂಕಟನರಸಿಂಹಾಚಾರ್ಯರು ತಮ್ಮ ತಂದೆಯಂತೆ ಚತುಶ್ಶಾಸ್ತ್ರ ಪಂಡಿತರೂ ಕರ್ಮಠರೂ ಆಗಿದ್ದರು. ಕಾಲಕ್ರಮದಲ್ಲಿ ನರಸಿಂಹಾಚಾರ್ಯರು ಗದ್ವಾಲಿಗೆ ಸೇರಿದ ಐಜಿ ಗ್ರಾಮದಲ್ಲಿ ನೆಲಸಿದರು. ಗದ್ವಾಲ್‌ರಾಜರಿಂದ ಮರ್ಯಾದಿತರಾದ ಆಪಸ್ತಂಭ ಶಾಖೆಯ ಗೌತಮಗೋತ್ರದ ನರಸಿಂಹಾಚಾರ್ಯರಿಗೆ ಶ್ರೀ ವೆಂಕಟೇಶದೇವರ ಅನುಗ್ರಹದಿಂದ ಜನಿಸಿದ ಶಿಶುವಿಗೆ ವೆಂಕಟರಾಮಾಚಾರ್ಯರೆಂದು ನಾಮಕರಣ ಮಾಡಿದರು. ಇವರು ಭಾರತದ ಧೃಷ್ಟದ್ಯುಮ್ನನ ಮೂರನೆಯ ಅವತಾರವೆಂದು ಹರಿದಾಸರ ಪೀಳಿಗೆಯಲ್ಲಿ ಪ್ರಚಲಿತವಾಗಿದೆ. ವೆಂಕಟರಾಮಾಚಾರ್ಯರು ಬೆಳೆದು ಗೃಹಸ್ಥಾಶ್ರಮ ಸ್ವೀಕರಿಸಿ ೩೦ ವರ್ಷಗಳಾದರೂ ನಿರಕ್ಷರ ಕುಕ್ಷಿಗಳಂತೆ ವಿದ್ಯಾಹೀನರಾಗಿರಲು, ಉತ್ತನೂರಿನಲ್ಲಿದ್ದ ಶ್ರೀ ಗೋಪಾಲದಾಸರ ಸಲಹೆಯಂತೆ ವೆಂಕಟನರಸಿಂಹಾಚಾರ್ಯರು ಮಗ ರಾಮಾಚಾರ್ಯರನ್ನು ಕರೆಸಿಕೊಂಡು ತಮಗೆ ತಿಳಿದಿದ್ದ

ಸಕಲಶಾಸ್ತ್ರವನ್ನೂ ಓದುತ್ತಿರಲು ವೆಂಕಟರಾಮಾಚಾರ್ಯರು ಶ್ರವಣ ಮಾತ್ರದಿಂದಲೇ ಎಲ್ಲವನ್ನೂ ಗ್ರಹಿಸಿ ಉದ್ದಾಮ ಪಂಡಿತರಾದರು. ತಂದೆಯ ಮರಣಾನಂತರ ವೆಂಕಟಾರಾಮಾಚಾರ್ಯರು ಆಂಜನೇಯನು ಸ್ವಪ್ನದಲ್ಲಿ ಆದೇಶ ನೀಡಿದಂತೆ ಬೀಚನಪಲ್ಲಿಗೆ ಹೋಗಿ ೧೨ ವರ್ಷಕಾಲ ಪ್ರಾಣದೇವರನ್ನು ಅರ್ಚಿಸಿ ಕೃತಾರ್ಥರಾದರು. 'ವಾಸುದೇವ ವಿಠಲ'ರೆಂಬ ಅಂಕಿತವು ದೊರಕಿತು. ಮುಂದೆ ತುಂಗಾತೀರದ ವೇಣೀಸೋಮಪುರದಲ್ಲಿ ನೆಲೆಸಿದರು. ಶ್ರೀ ಗೋಪಾಲದಾಸರು ಮತ್ತು ಅವರ ತಮ್ಮಂದಿರುಗಳೊಡನೆ ರಾಮಾಚಾರ್ಯರಿಗೆ ಬಹು ಹೊಂದಿಕೆಯಾಗಿ ಇವರೆಲ್ಲ ವೇಣೀ ಸೋಮಪುರದಲ್ಲೆ ಇರಹತ್ತಿದರು ಶ್ರೀ ವಾಸುದೇವವಿಠಲರು ೩ ವರ್ಷಕ್ಕೊಮ್ಮೆ ಹನ್ನೆರಡಾವರ್ತಿ 'ಸುಧಾ'ಮಂಗಳ ಮಾಡಿದರಂತೆ. ಮಹಾತ್ಮರಾದ ಇವರು ಅನೇಕ ಅದ್ಭುತಗಳನ್ನೂ ನಡೆಸಿದರಂತೆ. ಇವರು ಅನೇಕ ಸೂಳಾದಿಗಳು, ದೇವರನಾಮಗಳು ಮೊದಲಾದುವನ್ನು ರಚಿಸಿದ್ದಾರೆ. ಮಾನಸ ಸ್ಮೃತಿ ಉಪಾಸನಾ ಭಾಗ, ಸಪ್ತಮಸ್ಕಂಧ ಭಾಗವತ ಮಂದನಂದಿನೀ ಟೀಕಾ, ಗಾಯತ್ರೀಸಾರಸಂಗ್ರಹ ಮೊದಲಾದ ಸುಮಾರು ಹದಿಮೂರು ಗ್ರಂಥಗಳನ್ನು ಸಂಸ್ಕೃತ ಭಾಷೆಯಲ್ಲಿ ಬರೆದಿದ್ದಾರೆ. ಇವರಿಗೆ ವ್ಯಾಸತತ್ವಜ್ಞರೆಂದೂ (ಸನ್ಯಾಶ್ರಮದ) ಹೆಸರು. ಇವರು ಪೂರ್ಣಾಯುಗಳಾಗಿ ಅನೇಕ ಮಹಿಮೆಗಳನ್ನು ತೋರಿ ಸಮಾಧಿಗತರಾದರು.

## ಮಧ್ವಮತದ ಮಹಾತ್ಮ್ಯೆ

೪೮ ರಾಗ–ಪಂತುರಾವಳಿ ತಾಳ–ಆದಿ

**ಪಲ್ಲವಿ :- ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ ಬಿಟ್ಟು ಕೆಡಬೇಡಿ ||**

**ಚ. ೧ - ಹರಿ ಸರ್ವೋತ್ತಮನಹುದೆಂಬೊ ಜ್ಞಾನವ |**
**ತಾರಮ್ಯದಿಂದ ತಿಳಿಸೊ ಮಾರ್ಗದ ||೧||**

**೨ - ಘೋರಯಮನಭಯ ದೂರ ಓಡಿಸಿ ಮು–**
**ರಾರಿಯ ಚರಣವ ತೋರೋ ಮಾರ್ಗದ ||೨||**

**೩ - ಭಾರತೀಶ ಮುಖ್ಯ ಪ್ರಾಣಾಂತರ್ಗತ**
**ನೀರಜಾಕ್ಷ ನಮ್ಮ ಪುರಂದರವಿಠಲನ ||೩||**

ಸ. ಅ :- ಮಧ್ವಾಚಾರ್ಯರಿಂದ ಸ್ಥಾಪಿತವಾಗಿರುವ ಮತದಲ್ಲಿ ನಿರ್ದೇಶಿತವಾಗಿರುವ ನಿರ್ಣಯವನ್ನು ಬಿಡದೆ ಅನುಸರಿಸಿರಿ, ಇಲ್ಲದಿದ್ದಲ್ಲಿ ನಿಮಗೆ ಹಾನಿಯುಂಟು.

೧ - ಹರಿಯೆ ಸರ್ವೋತ್ತಮನು ಎಂಬ (ದೃಢ)ಜ್ಞಾನದಿಂದ (ಉಳಿದ ದೇವರುಗಳ) ತಾರತಮ್ಯವನ್ನು ತಿಳಿಸುವ ದಾರಿಯುಳ್ಳ (ಮಧ್ವಮತದ ಸಿದ್ಧಾಂತವನ್ನು ನಂಬಿ)

೨ - ಭಯಂಕರನಾದ ಮೃತ್ಯುದೇವತೆಯನ್ನು ಹತ್ತಿರ ಬರದಂತೆ ದೂಡಿ ಮುರಾರಿಯ ಪಾದದರ್ಶನ ಮಾಡಿಸುವ (ಮಧ್ವಮತಸಿದ್ಧಾಂತವನ್ನು ನಂಬಿ)

೩ - ಭಾರತೀದೇವಿಯ ಪತಿಯಾದ ಮುಖ್ಯಪ್ರಾಣದೇವರಲ್ಲಿ ಅಂತರ್ಗತನಾಗಿರುವ ಕಮಲಾಕ್ಷನಾದ ನಮ್ಮ ಪುರಂದರವಿಠಲ ಸ್ವಾಮಿಯು ಉಪದೇಶಿಸಿರುವ (ಮಧ್ವಮತದ ನಿರ್ಣಯವನ್ನು ನಂಬಿ)

ವಿ. ವಿ :- ಮಧ್ವಮತ-ಮಧ್ವಾಚಾರ್ಯರು (ಆನಂದತೀರ್ಥರು) ನೆಲೆಗೊಳಿಸಿರುವ ಮತ. ಹರಿಯೇ ಸರ್ವೋತ್ತಮನು, ವಾಯುವೇ ಜೀವೋತ್ತಮನು ಎಂಬುದು ಅವರ ಸಿದ್ಧಾಂತವು. ಹರಿ, ಲಕ್ಷ್ಮೀದೇವಿ, ಬ್ರಹ್ಮದೇವರು, ಮುಖ್ಯಪ್ರಾಣರು, ಇವರ ಪತ್ನಿಯರಾದ ಸರಸ್ವತಿ, ಭಾರತಿ; ಗರುಡ, ಶೇಷ, ರುದ್ರರು ಮತ್ತು ಇವರುಗಳ ಪತ್ನಿಯರು ಇಂದ್ರ ಮುಂತಾದ ಕ್ರಮದಲ್ಲಿ ಈ ತಾರತಮ್ಯವು ಏರ್ಪಟ್ಟಿದೆ

## ದೇವರ ಮೇಲೆ

೫೫ ರಾಗ-ಪಂತುರಾವಳಿ ತಾಳ-ಆದಿ

ಪಲ್ಲವಿ :- **ಕೃಷ್ಣ ಕೃಷ್ಣ ಕೃಷ್ಣ ಎಂದು-ಮೂರು ಬಾರಿ ನೆನೆಯಲು । ಸಂ ।**

ಅ. ಪ :- **ತುಷ್ಟನಾಗಿ ಮುಕ್ತಿಕೊಡುವ-ಪಾತಕ ಭಾರವ ಕಳೆವ**

ಪಾ. [ತುಷ್ಟನಾಗಿ ಮುಕುತಿಕೊಟ್ಟು ಪಾತಕಭಾರ ಹರಿವನು-ಮಿಕ್ಕ ಭಾರ ಹೊರುವನು.]

ಚ. ೧ - **ಕಮಲನಾಭನ ಚಿಹ್ನೆಯನ್ನು-ಧರಿಸಿಕೊಂಡು ಮೆರೆಯಿರೊ-**
**ಯಮನಭಟರು ಕಂಡು ಅಂಜಿ-ಅಟವಿಗೋಡುವರೊ ||೧||**

೨ - **ಸಕಲವೇದ ಶಾಸ್ತ್ರಪಠಿಸಿ-ಸಾರವನ್ನು ತಿಳಿದರೇನು-**
**ಮಕರಕುಂಡಲಧರನ-ನಾಮಕೆ ಮತ್ತೆ ಸರಿಯಿಲ್ಲವೊ ||೨||**

೩ - **ಜನ್ಮವೆತ್ತಿ ಮಧ್ವಮತವನ್ನನುಸರಿಸಿ ನಡೆಯಿರೊ ।**
**ಸುಮ್ಮನದಿ ಸಿರಿಕೃಷ್ಣ ತನ್ನ ಲೋಕವ ಕೊಡುವನು ||೩||**

ಸ. ಅ :- ಕೃಷ್ಣ ಎಂದು ಮೂರು ಸಾರಿ (ಅಂತರಂಗಪೂರ್ವಕವಾಗಿ) ಸ್ಮರಿಸಿದಲ್ಲಿ ಕೃಷ್ಣನು ಪ್ರೀತನಾಗಿ ಮೋಕ್ಷವನ್ನು ಕೊಡುವನು. ನಮ್ಮ ಪಾಪದ ಹೊರೆಯನ್ನೆಲ್ಲ ಹೋಗಲಾಡಿಸಿ ರಕ್ಷಣೆಯೆ ಮೊದಲಾದ ಭಾರವನ್ನು ಹೊರುವನು.

೧ - ನಾನು ಕಮಲನಾಭನ (ವಿಷ್ಣುವಿನ) ಭಕ್ತನೆಂಬುದರ ಕುರುಹಾಗಿ ಶಂಖ-ಚಕ್ರಾದಿ ದ್ವಾದಶ ಚಿಹ್ನೆಗಳನ್ನು ದೇಹದಲ್ಲಿ ಧರಿಸಿಕೊಂಡಲ್ಲಿ-ಅದನ್ನು ಕಂಡು ಯಮನಭಟರು ಹೆದರಿ ಕಾಡಿಗೆ (ದಿಕ್ಕಾಪಾಲಾಗಿ) ಓಡುವರು.(ಆದುದರಿಂದ)

೨ - ಸಕಲಶಾಸ್ತ್ರಗಳನ್ನೂ ಓದಿ ಅದರ ಸಾರಾಂಶವನ್ನೆಲ್ಲ ಗ್ರಹಿಸಿದ ಮಾತ್ರ ಏನು ಪ್ರಯೋಜನ? ಅದಾವುದೂ ಮಕರಕುಂಡಲಧಾರಿಯಾದ ಹರಿನಾಮಕ್ಕೆ ಸರಿಬಾರದು. (ಆದುದರಿಂದ)

೩ - ಜನ್ಮತಾಳಿ ಜೀವಿಗೆ ಮಧ್ವಮತವನ್ನು ಅನುಸರಿಸಿ ನಡೆಯಿರಿ, ಒಂದೇ ಮನಸ್ಸಿನಿಂದ ನಡೆದಲ್ಲಿ ಸಂತೋಷದಿಂದ ಶ್ರೀ ಕೃಷ್ಣನು ತನ್ನ ಲೋಕಕ್ಕೆ (ವೈಕುಂಠಕ್ಕೆ) ಒಯ್ಯುವನು (ಆದುದರಿಂದ)

**ಸೂ:** ಇದು ಶ್ರೀ ವ್ಯಾಸರಾಯರು ರಚಿಸಿದ ಹಾಡು.

(ವಿ. ವಿ. - ಮೇಲಿನ ಹಾಡಿನ ೩ ನೆಯ ಚರಣ ಮೂಲದಲ್ಲಿರುವಂತೆ)-

ಜನ್ಮ ಮುಕ್ತಿ ಮಧ್ವಮತವನ್ನನುಸರಿಸಿ ನಡೆಯಿರೊ ।
ಒಮ್ಮನದಿ ಸಾರಿ ಕೃಷ್ಣ ತನ್ನ ಲೋಕವ ಕೊಡುವನು ॥೩॥

ಸ. ಅ: - (ಎಲೆ ಮಾನವರೆ !) ಮಧ್ವಮತವನ್ನು ಅನುಸರಿಸಿ ಬಾಳಿರಿ. (ಅದರಿಂದ) ಜನ್ಮಕ್ಕೆ ಮುಕ್ತಿ ದೊರಕುವುದು. (ಮತ್ತೆ-ಮತ್ತೆ ಜನ್ಮವೆತ್ತುವ ಕಷ್ಟವು ತಪ್ಪುವುದು.) ಒಂದೇ ಮನಸ್ಸಿನಿಂದ (ದೃಢಚಿತ್ತದಿಂದ) ನಡೆಯಿರಿ. (ಅನುಸರಿಸಿ) ಕೃಷ್ಣನು ತನ್ನ ಲೋಕವನ್ನು (ವೈಕುಂಠವನ್ನು)ಅನುಗ್ರಹಿಸುವನು.

ಕ್ಲಿ. ಅ:-ಒಮ್ಮನದಿ - ಒಂದೇ ಮನಸ್ಸಿನಿಂದ; ಸಾರಿ . ಅನುಸರಿಸಿ (ಆಚರಿಸಿ)

**ಚಾತುರ್ಮಾಸ್ಯದ ಪ್ರತಿ ಏಕಾದಶಿಯ ದಿನದಲ್ಲಿಯೂ ದೇವರನ್ನು ಅರ್ಚಿಸಿದ ತುಲಸಿಯನ್ನು ತಟ್ಟೆಯಲ್ಲಿಟ್ಟು ಆ ತಟ್ಟೆಯನ್ನು ತಲೆಯ ಮೇಲೆ ಹೊತ್ತು ಕೊಂಡು ನರ್ತನ ಮಾಡುತ್ತ ಹೇಳುವ ಹಾಡು**

೪೩ ರಾಗ–ಪಂತುವರಾಳಿ ತಾಳ–ರೂಪಕ

**ಪಲ್ಲವಿ :- ಡಂಗುರವ ಸಾರಿ ಹರಿಯ–ಡಿಂಗರಿಗರೆಲ್ಲರು ಭೂ॥**

**ಅ. ಪ :- ಮಂಡಲಕ್ಕೆ ಪಾಂಡುರಂಗ–ವಿಠಲನೆ ಪರದೈವನೆಂದು ॥**

**ಚ. ೧ - ಹರಿಯು ಮುಡಿದ ಹೂವ ಹರಿವಾಣದಲ್ಲಿ ಹೊತ್ತುಕೊಂಡು ।**
**ಹರುಷದಿಂದ ಹಾಡಿಪಾಡಿ–ಕುಣಿದು ಚಪ್ಪಳಿಕ್ಕುತ ॥೧॥**

**೨ - ಒಡಲ ಝೂಂಗಟೆಯ ಮಾಡಿ–ನುಡಿವ ನಾಲಿಗೆಯ ಪಿಡಿದು–**
**ಬಿಡದೆ ಧಣ ಧಣರೆಂದು–ಹೊಡೆದು ಚಪ್ಪಳಿಕ್ಕುತ ॥೨॥**

**೩ - ಇಂತು ಸಕಲ ಲೋಕಕೆ ಲಕ್ಷ್ಮೀ–ಕಾಂತನಲ್ಲದಿಲ್ಲವೆಂದು**
**ಸಂತತ ಪುರಂದರವಿಠಲನ ನಿ–ಶ್ಚಿಂತೆಯಿಂದ ಭಜಿಸುತ ॥೩॥**

ಸ. ಅ :- ಹರಿಯ ಸೇವಕರುಗಳೆಲ್ಲ ಈ ಭೂಮಂಡಲಕ್ಕೆ ಪಾಂಡುರಂಗದೇವನೆ ಪರಾತ್ಪರನಾದ ದೇವನೆಂದು ಡಂಗುರ ಹೊಡೆಯುತ್ತ ಪ್ರಸಾರ ಮಾಡಿ.

ಚ. ೧ - ಶ್ರೀಹರಿ ಧರಿಸಿದ (ಅವನನ್ನು ಪೂಜಿಸಿದ) ಹೂವನ್ನು (ನಿರ್ಮಾಲ್ಯವನ್ನು) ಹರಿವಾಣವೆಂಬ ತಟ್ಟೆಯಲ್ಲಿಟ್ಟು ತಲೆಯಮೇಲೆ ಹೊತ್ತುಕೊಂಡು, ಸಂತೋಷ ದಿಂದ ಹಾಡಿಕೊಂಡು ಚಪ್ಪಳಿಕ್ಕಿಕೊಂಡು ನಾಟ್ಯವಾಡುತ್ತ (ಪ್ರಕಟಿಸಿ)

೨ - ದೇಹವೆಂಬುದೇ ಒಂದು ಜಾಗಟೆ, ನಾಲಗೆಯೇ ಅದನ್ನು ಬಾರಿಸುವ ಕೋಲು ಅದರಿಂದ ಧಣ ಧಣವೆಂದು ಶಬ್ದ ಹೊರಡಿಸುತ್ತ ಚಪ್ಪಳಿಕ್ಕಿಕೊಂಡು (ಪ್ರಕಟಿಸಿ)

೩ - ಈರೀತಿ ಲಕ್ಷ್ಮಿಕಾಂತನೇ ಹೊರತು ಬೇರೊಂದಿಲ್ಲವೆಂದು ಸದಾ ಭಜಿಸುತ್ತ ಲೋಕದಲ್ಲಿನ ಹರಿಭಕ್ತರೆಲ್ಲ ಪುರಂದರವಿಠಲಾಂತರ್ಗತ ಸ್ವಾಮಿಯನ್ನು ಸಾರುತ್ತಿರಬೇಕು.

ವಿ. ವಿ :- ಡಿಂಗರಿಗರು - ಸೇವಕರು. ಹರಿಭಕ್ತರಿಗೆ ಹರಿಗಿಂತ ಹೆಚ್ಚಿನ ಮತ್ತೊಂದು ದೈವವಿಲ್ಲ ವೆಂಬ ನಂಬುಗೆ ದೃಢವಾಗಿರಬೇಕು. 'ತ್ವಮೇವ ಮಾತಾಚ-ಪಿತಾ ತ್ವಮೇವ ತ್ವಮೇವ ಬಂಧುಶ್ಚ ಸಖಾ ತ್ವಮೇವ-ತ್ವಮೇವ ವಿದ್ಯಾದ್ರವಿಣಂ ತ್ವಮೇವ ತ್ವಮೇವ ಸರ್ವಂಮಮ ದೇವ ದೇವ, ಎಂಬ ಸರ್ವಸಮರ್ಪಣಾಭಾವದಲ್ಲಿ ಸ್ವಲ್ಪವೂ ಸಂಶಯವಿರಬಾರದು.

## ಏಕಾಂತ ಸೇವೆಯ ಹಾಡು

೪೪ ರಾಗ–ಶಂಕರಾಭರಣ ತಾಳ–ಮಿ. ಛಾ.

**ಪಲ್ಲವಿ :- ಅಂಕುಡೊಂಕಾದ ಮಂಚ–ಅನಂತಕಾಲಿನ ಮಂಚ ।**
**ಸಂಕರುಷಣಮಂಚ–ಸುಖದ ಮಂಚ ।**
**ಶಂಕರನ ಕೊರಳಿಗೆ ಪದಕವಾಗಿಹ ಮಂಚ ।**
**ವೆಂಕಟಪುರಂದರವಿಠಲ ಮಲಗುವ ಮಂಚ ।**
**ಶೃಂಗಾರವಾಗಿದೆ ರಂಗನ ಮಂಚ ।**
**ಅಂಗನೆಲಕುಮಿಯ–ಅರಸ ಮಲಗುವ ಮಂಚ ॥**

ಸ. ಅ :- ವಕ್ರ–ವಕ್ರವಾಗಿರುವ, ಲೆಕ್ಕಕ್ಕೆ ಸಿಕ್ಕದಿರುವಷ್ಟು ಕಾಲುಗಳುಳ್ಳ ಸುಖವನ್ನುಂಟು ಮಾಡುವ ಮಂಚ. ಶಂಕರನ ಕುತ್ತಿಗೆಯಲ್ಲಿ ಪದಕವಾಗಿ ಬೆಳಗುವ, ಪಾಪಹಾರಕನಾದ ವೆಂಕಟೇಶನು ಮಲಗುವ ಸಂಕರುಷಣ (ಶೇಷ) ನಾಮಕ ಮಂಚವು ಸುಖದಾಯಕವು. ಸ್ತ್ರೀರತ್ನಳಾದ ಲಕ್ಷ್ಮೀದೇವಿಯ ಒಡೆಯನು ಮಲಗುವ ಮಂಚವು ಅತ್ಯಂತ ಅಲಂಕಾರ ಪೂರ್ಣವಾಗಿದೆ.

ವಿ. ವಿ :- ಆದಿಶೇಷನನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಕ್ಷೀರಾಬ್ಧಿಯಲ್ಲಿ ಲಕ್ಷ್ಮೀದೇವಿಯೊಡನೆ ಶಯನಿಸಿರುವ ನಾರಾಯಣನ ಶಯ್ಯೆಯನ್ನು ದಾಸರು ಇಂತು ವರ್ಣಿಸಿದ್ದಾರೆ.

## ತೊಟ್ಟಿಲ ಪೂಜೆಯ ಹಾಡು

೪೫ ರಾಗ–ಶಂಕರಾಭರಣ ತಾಳ-ಮಿ.ಛಾ.

**ಪಲ್ಲವಿ :- ತೂಗಿರೆ ರಂಗನ್ನ ತೂಗಿರೆ ಕೃಷ್ಣನ್ನ–ತೂಗಿರೆ ಅಚ್ಯುತಾ–ನಂತನ್ನ॥**
**ಅ. ಪ :- ತೂಗಿರೆ ವರಗಿರಿ–ಯಪ್ಪ ತಿಮ್ಮಪ್ಪನ್ನ–ತೂಗಿರೆ ಕಾವೇರಿ–ರಂಗನ್ನ ॥**
**ಚ. ೧ - ನಾಗಲೋಕದಲ್ಲಿ ನಾರಾಯಣ ಮಲಗ್ಯಾನೆ–ಹೋಗೊಮ್ಮೆ ತೊಟ್ಟಿಲ ತೂಗಿರೆ-**
**ಹೋಗೊಮ್ಮೆ ನಿಮ್ಮ ಬಾಲರಾಘವನಳುತಾನೆ–ಭಾಗ್ಯವಂತನೆಂದು ತೂಗಿರೆ ॥೧॥**
**೨ -ಇಂದ್ರಲೋಕದಲ್ಲಿ ಸುಂದರ ಮಲಗ್ಯಾನೆ–ಬಂದೊಮ್ಮೆ ತೊಟ್ಟಿಲ ತೂಗಿರೆ।**
**ಬಂದೊಮ್ಮೆ ತೊಟ್ಟಿಲ ತೂಗಿರೆ ಗೋ-ವಿಂದನ ತೊಟ್ಟಿಲ ತೂಗಿರೆ ॥೨॥**
**೩ -ಹುಲಿಯುಗುರರಳೋಲೆ ಕೊರಳಪದಕ ಹಾರ ತರಳನ ತೊಟ್ಟಿಲ ತೂಗಿರೆ ।**
**ತರಳನ ತೊಟ್ಟಿಲ ತೂಗಿರೆ ಶ್ರೀ ಪುರಂದರವಿಠಲನ ತೂಗಿರೆ ॥೩॥**

ಸ. ಅ :- ರಂಗನೂ, ಕೃಷ್ಣನೂ, ಅಚ್ಯುತನೂ ಅನಂತನೂ ಆದ ಸರ್ವೇಶ್ವರನು ಮಲಗಿರುವ ತೊಟ್ಟಿಲನ್ನು ತೂಗಿರಿ.

ಶ್ರೇಷ್ಠವಾದ ಬೆಟ್ಟಕ್ಕೆ ಪ್ರಭುವಾದ ತಿಮ್ಮಪ್ಪನನ್ನು, ಕಾವೇರಿ ನದಿಯ ನಡುವೆ (ನಡುಗಡ್ಡೆಯಲ್ಲಿ) ನೆಲಸಿರುವ ರಂಗನನ್ನು ತೂಗಿರಿ.

ಚ. ೧ - ನಾಗಲೋಕದಲ್ಲಿ ನಾರಾಯಣನು ಮಲಗಿದ್ದಾನೆ, ಒಮ್ಮೆಯಾದರೂ ಹೋಗಿ ಆತನನ್ನು ತೂಗಿ. ಬಾಲಕನಾದ ಭಾಗ್ಯವಂತನಾದ ಶ್ರೀ ರಾಘವನನು ಅಳುತ್ತಿರಲು ಹೋಗಿ ತೂಗಿ.

೨ - ಸುಂದರನಾದ ಗೋವಿಂದನು ಇಂದ್ರಲೋಕದಲ್ಲಿ ತೊಟ್ಟಿಲಿನಲ್ಲಿ ಮಲಗಿದ್ದಾನೆ, ಒಂದು ಸಲವಾದರೂ ಬಂದು ತೂಗಿರಿ.

೩ - ಪುರಂದರವಿಠಲಾಂತರ್ಗತನಾದ ಆ ದೇವನು ಹುಲಿಯ ಉಗುರನ್ನು ಜೋಡಿಸಿರುವ ಸರ, ಅರಳಿಎಲೆಯ ಆಕಾರದ ನೆತ್ತಿಯ ಮೇಲೆ ಅಲಂಕರಿಸಿರುವ ಒಡವೆ, ಕುತ್ತಿಗೆಯಲ್ಲಿ ಪದಕವನ್ನು ಸೇರಿಸಿದ ಹಾರಗಳಿಂದಲಂಕೃತನಾಗಿರುವನು. ತೊಟ್ಟಿಲಿನಲ್ಲಿ ಮಲಗಿರುವ ಆ ಮಗುವನ್ನು ತೂಗಿರಿ.

ವಿ. ವಿ: ಮಾನವನ ಸ್ವಭಾವಕ್ಕೆ ತಕ್ಕಂತೆ ದೇವನನ್ನೂ ಮಗುವೆಂದು ಭಾವಿಸಿ ಆತನ ಅಂದ-ಚೆಂದವನ್ನೂ, ಬಾಲಲೀಲೆಗಳನ್ನೂ ಸ್ಮರಿಸಿಕೊಳ್ಳುತ್ತ, ತೊಟ್ಟಿಲಿನಲ್ಲಿ ಮಲಗಿಸಿ ಆತನನ್ನು ತೂಗುವುದೂ ಆತನ ಪೂಜೋಪಚಾರದಲ್ಲಿನ ಒಂದು ಭಾಗ.

ಅಚ್ಯುತ = ನಾಶವಿಲ್ಲದವ. ಅನಂತ - ಕೊನೆಯೇ ಇಲ್ಲದವ (ಸದಾಕಾಲದಲ್ಲೂಇರುವವ) ವರಗಿರಿ ಶ್ರೇಷ್ಠವಾದಬೆಟ್ಟ. ಅಪ್ಪ - ಪ್ರಭು, ಒಡೆಯ. ಸ್ವರ್ಗ ಮರ್ತ್ಯಪಾತಾಳಗಳಲ್ಲೆಲ್ಲಆತನ ವ್ಯಾಪ್ತಿ ಇದೆ ಎಂಬ ಭಾವ. ಸರ್ವವೂ ವಿಷ್ಣುಮಯ.

೪೬ ರಾಗ–ಆನಂದಭೈರವಿ ತಾಳ–ಖಂ.ಛಾ.

೧ ಆಶ್ಚರ್ಯಜನಕವಾಗಿ–ನಿರ್ಮಿಸಿದ–ಪಚ್ಚೆಯ ತೊಟ್ಟಿಲಲ್ಲಿ।
ಅಚ್ಯುತಾನಂತನಿರಲು–ತೂಗಿದರು-ಮತ್ಸ್ಯಾವತಾರ ಹರಿಯ ॥೧॥

೨ ಧರ್ಮಸಂಸ್ಥಾಪಕನು ಎಂದು–ನಿರವಧಿಕ–ನಿರ್ಮಲಚರಿತನೆಂದು।
ಮರ್ಮ ಕರ್ಮಗಳ ತಿಳಿದು–ತೂಗಿದರು–ಕೂರ್ಮಾವತಾರ ಹರಿಯ ॥೨॥

೩ ಕಂಕಣಧ್ವನಿಗಳಿಂದ–ಗೋಪಿಯರು–ಕಿಂಕಿಣಿಸ್ವನಗಳಿಂದ।
ಪಂಕಜಾಕ್ಷಿಯರು ಪಾಡಿ–ತೂಗಿದರು–ಶಂಕಿನಿ ಭಾಮಿನಿಯರು ॥೩॥

೪ ಪದ್ಮರಾಗವ ಪೋಲುವ–ಹರಿಪಾದ–ಪದ್ಮದಲಿ ತಮ್ಮ ಹೃದಯ।
ಹೃದಯಪದ್ಮದಲಿ ನೆಲಸಿ ಪಾಡಿ–ತೂಗಿದರು-ಪದ್ಮಿನಿ ಭಾಮಿನಿಯರು॥೪॥

೫ ಆನಂದಸದನದೊಳಗೆ–ಗೋಪಿಯರು– ಆನಂದಸುತನ ಕಂಡು।
ಆನಂದಭರಿತರಾಗಿ–ತೂಗಿದರು–ಆನಂದಭೈರವಿ ರಾಗದಿಂದ ॥೫॥

೬ ಇಂದುಧರ ಮಿತ್ರ ಜೋ ಜೋ–ಶ್ರೀಕೃಷ್ಣ–ಇಂದುರವಿನೇತ್ರ ಜೋಜೋ।
ಇಂದುಕುಲತಿಲಕಜೋಜೋ-ಪರಮಾತ್ಮ-ಇಂದಿರಾರಮಣ ಜೋಜೋ॥೬॥

೭ ನೀಲಘನಲೀಲ ಜೋ ಜೋ–ಕರುಣಾಲ-ವಾಲ ಶ್ರೀಕೃಷ್ಣ ಜೋ ಜೋ।
ಲೀಲಾವತಾರ ಜೋ ಜೋ ಪರಮಾತ್ಮ–ಬಾಲಗೋಪಾಲಜೋಜೋ ॥೭॥

೮ ತುಂಗಭವಭಂಗ ಜೋ ಜೋ–ಶ್ರೀಕೃಷ್ಣ–ರಂಗ ಕೃಪಾಂಗ ಜೋ ಜೋ।
ಮಂಗಳಾಪಾಂಗಜೋಜೋ-ಮೋಹನಾಂಗ-ರಂಗವಿಠ್ಠಲನೆ ಜೋಜೋ ॥೮॥

ಸ. ಅ :- ಆಶ್ಚರ್ಯವು ಉಂಟಾಗುವಂತೆ ರಚಿಸಿದ ಪಚ್ಚೆಯಿಂದ ಕೆತ್ತಲ್ಪಟ್ಟ(ಪಚ್ಚೆಯನ್ನು ಮೆಟ್ಟದ) ತೊಟ್ಟಲಿನಲ್ಲಿ ನಾಶರಹಿತನೂ, ಕೊನೆ ಇಲ್ಲದವನೂ ಆದ ದೇವ ದೇವನು ಮಲಗಿರಲು ಮತ್ಸ್ಯಾವತಾರವನ್ನೆತ್ತಿದ ಆ ಹರಿಯನ್ನು ತೂಗಿದರು.

೨ -ಧರ್ಮಸಂಸ್ಥಾಪಕನೆಂದೂ, ಅಳತೆಗೆ ನಿಲುಕದ ಶುದ್ಧ ಚರಿತ್ರೆಯುಳ್ಳವನೆಂದೂ, ರಹಸ್ಯಪೂರಿತವಾದ ಆತನ ಕೃತ್ಯಗಳನ್ನು ಅರಿತುಕೊಂಡು ಕೂರ್ಮಾವತಾರ ವನ್ನೆತ್ತಿದ ಹರಿಯನ್ನು ತೂಗಿದರು.

೩ - ಶಂಕಿನಿ ಎಂಬ ಜಾತಿಗೆ ಸೇರಿದ ಗೋಪಿಕಾ ಸ್ತ್ರೀಯರು ಅವರ ಕೈಗಳಲ್ಲಿನ ಕಡಗ ಗಳು ಕಿಣಿ ಕಿಣಿ ಎಂದು ಧ್ವನಿಸುತ್ತಿರಲು, ಕಮಲನೇತ್ರೆಯರಾದ ಅವರು ಹಾಡುತ್ತ ಹರಿಯನ್ನು ತೂಗಿದರು.

೪ - ಪದ್ಮರಾಗದ(ನವರತ್ನಗಳಲ್ಲಿ ಒಂದಾದ ಮಣಿ ಅಥವಾ) ತಾವರೆ ಬಣ್ಣವನ್ನು ಹೋಲುವ ಹರಿಯ ಪಾದಕಮಲವನ್ನು ಪದ್ಮಿನಿ ಜಾತಿಗೆ ಸೇರಿದ ಸ್ತ್ರೀಯರು ತಮ್ಮ-ತಮ್ಮ ಹೃದಯಕಮಲದಲ್ಲಿ ಸ್ಥಿರವಾಗಿ ನಿಲ್ಲಿಸಿಕೊಂಡು ಹಾಡುತ್ತ ತೂಗಿದರು.

೫ -(ಮೋಕ್ಷಸ್ಥಾನವಾದ ವೈಕುಂಠದಲ್ಲಿ ಅಥವಾ) ಆ ನಂದಗೋಪನಮನೆಯಲ್ಲಿರುವ ಆ ನಿತ್ಯಾನಂದನನ್ನು ಅಥವ ನಂದನ ಸುತನನ್ನು ಕಂಡು ಆನಂದಭರಿತರಾಗಿ ಗೋಪಿಕಾ ಸ್ತ್ರೀಯರು ಆನಂದಭೈರವಿ ರಾಗದಲ್ಲಿ ಹಾಡುತ್ತ ಹರಿಯನ್ನು ತೂಗಿದರು.

೬ - ಚಂದ್ರನನ್ನು ಧರಿಸಿರುವ ಶಂಕರನ ಮಿತ್ರನೆ, ಶ್ರೀಕೃಷ್ಣನೇ, ಚಂದ್ರ-ಸೂರ್ಯ ರನ್ನು ಕಣ್ಣುಗಳನ್ನಾಗಿ ಉಳ್ಳವನೆ, ಚಂದ್ರವಂಶಕ್ಕೆ ತಿಲಕ ಸ್ವರೂಪನೆ, ಪರಮಾತ್ಮನೆ, ಇಂದಿರಾಪತಿಯೇ ನಿನಗೆ ಜೋ ಜೋ (ನಿದ್ದೆ ಬರುವಂತೆ ಹಾಡುವ ಹಾಡು).

೭ - ಒತ್ತಾದ ನೀಲಿಯ ಬಣ್ಣವುಳ್ಳವನೆ, ಕರುಣೆಗೆ ಪಾತಿಯಂತಿರುವವನೆ, ಶ್ರೀಕೃಷ್ಣನೆ, ಲೀಲೆಯಿಂದ ವಿವಿಧಾವತಾರಗಳನ್ನೆತ್ತಿದವನೆ, ಪರಮಾತ್ಮನೆ, ಬಾಲನಾದ ಗೋಪಾಲನೆ ನಿನಗೆ ಲಾಲಿಯು (ಸುಖನಿದ್ದೆ ಬರುವುದಕ್ಕೆ ಹಾಡುವ ಹಾಡು)

೮ - ಸರ್ವಶ್ರೇಷ್ಠನೆ, ಈ ಸಂಸಾರದ ಕೋಟಲೆಯನ್ನು ನಾಶಗೊಳಿಸುವವನೆ, ಶ್ರೀಕೃಷ್ಣನೆ, ರಂಗಸ್ವಾಮಿಯೆ, ಕೃಪಾಪೂರಿತ ಕಡೆಗಣ್ಣುಳ್ಳವನೆ, ಮಂಗಳ ಕರವಾದ ಕಿರುನೋಟವುಳ್ಳವನೆ, ಸುಂದರಾಂಗನೆ, ರಂಗವಿಠಲನಾಮಕ ಸ್ವಾಮಿಯೆ ಜೋಗುಳವು.

ಸೂ: ಬೆಳಗ್ಗೆ ದೇವರಿಗೆ ಸುಪ್ರಭಾತವನ್ನು ಹೇಳಲು ಪ್ರಾರಂಭಿಸಿ ರಾತ್ರೆ ಆತನು ಪವಡಿಸುವವರಿವಿಗೂ ಯಥಾ ಕಾಲಗಳಲ್ಲಿ ಆತನಿಗೆ ಸಲ್ಲಿಸುವ ಆದರೋಪಚಾರಗಳಲ್ಲಿ ಶಿಶುರೂಪನನ್ನು ತೊಟ್ಟಲಿನಲ್ಲಿ ಮಲಗಿಸಿ ಜೋಲೋತ್ಸವ ಮಾಡುವುದೂ, ಆ ವೇಳೆಯಲ್ಲಿ ಆತನ ಅನಂತ ಗುಣಗಳನ್ನೂ, ಬಾಲಲೀಲೆಗಳನ್ನೂ ವರ್ಣಿಸುತ್ತ ಹಾಡು ಹೇಳುವುದೂ ನಡೆದು ಬಂದಿರುವ ಪದ್ಧತಿ.

ಈ ರಚನೆಯು ಶ್ರೀಪಾದರಾಯರು ಹಾಡಿದುದು.

ವಿ :- ಸ್ತ್ರೀಯರಲ್ಲಿ ಅವರವರ ಸ್ವಭಾವ ಲಕ್ಷಣಾದಿಗಳಿಂದ ಶಂಕಿನಿ, ಪದ್ಮಿನಿ, ಹಸ್ತಿನಿ ಮತ್ತು ಚಿತ್ತಿನಿ-ಎಂದು ನಾಲ್ಕು ವರ್ಗವಾಗಿ ವಿಂಗಡಿಸಿದ್ದಾರೆ. ಅವರುಗಳಲ್ಲಿ ಮೊದಲಿನ ಎರಡು ಗುಂಪಿನವರು ಉತ್ತಮಜಾತಿಗೆ ಸೇರಿದವರು.

ಆನಂದಸದನ = ಆನಂದವನ್ನು ಉಂಟುಮಾಡುವ ಮನೆ (ಮೋಕ್ಷಪದಸ್ಥಾನ)

ಆ ನಂದಸದನ = ಗೋಕುಲದಲ್ಲಿದ್ದ ನಂದನೆಂಬುವವನ ಮನೆ (ಹೀಗೆ ಉಭಯಾರ್ಥ)

## ಜೋಗುಳ

೪೭ ರಾಗ–ಶಂಕರಾಭರಣ ತಾಳ– ಮಿ.ಛಾ.

**ಪ್ರಳಯಜಲದಲಿ ನೀನಾಲದೆಲೆಯ ಮೇಲೆ**
**ಹಲವುಜೀವರು ನಿನ್ನ ಉದರದೊಳಿರಲು ।**
**ಕೆಲವು ದಿನದಿ ಯೋಗನಿದ್ರೆಯೊಳಿರೆ**
**ನಲವಿಂದ ಸೃಜಿಸುವೆನೆಂದು ನಿರ್ಮಿಸಿದೆ ॥ಜೋ ಜೋ ॥೧॥**
**ಸಿರಿಭಾಗ್ಯ ರೌಪ್ಯಪುರದೊಳು ಹೆಚ್ಚಲೆಂದು**
**ಸುರಋಷಿಗಳೆಲ್ಲ ಹೂಮಳೆಗರೆಯೆ ।**
**ವರಮುನಿಗಳೆಲ್ಲ ಶಿರವನ್ನು ತೂಗೆ**
**ಗುರು ವಾದಿರಾಜಗೊಲಿದೆ ಹಯವದನ ॥ಜೋ ಜೋ ॥೧॥**
**ಕ್ಷೀರಾಂಬುಧಿಯನ್ನೆ ತೊಟ್ಟಿಲ ಮಾಡಿ**
**ವೋರಂತೆ ನಾಲ್ಕು ವೇದಗಳ ನೇಣನೆ ಮಾಡಿ ।**
**ಧೀರಶೇಷನು ಬಂದು ಹಾಸಿಗೆಯಾಗಲು**
**ನಾರಿಯರೊಡನೆ ಮಲಗಿದೆ ಹಯವದನ ॥ಜೋ ಜೋ॥**

ಅ :-೧ ಪ್ರಳಯಕಾಲದಲ್ಲಿ ಸರ್ವತ್ರ ನೀರೇ ಆವರಿಸಿಕೊಂಡಿರುವಾಗ, ನಿನ್ನ ಹೊಟ್ಟೆಯೊಳಗೆ ನಾನಾ ಜೀವರುಗಳು ಆಶ್ರಯ ಪಡೆದಿರಲು, ನೀನು (ಭೂದೇವಿಯು ತಾಳಿದ) ಆಲದ ಎಲೆಯ ಮೇಲೆ ಕೆಲವುಕಾಲ ಯೋಗ ನಿದ್ರಾಸಕ್ತನಾಗಿದ್ದು ಎಚ್ಚೆತ್ತು ಪ್ರೀತಿಯಿಂದ ಪುನಃ ಸೃಷ್ಟಿಗೆಂದು ಕೈಯಿಕ್ಕುವೆ. ಇಂತಹ ನಿನಗೆ ಜೋಗುಳವು.

೨- ಸಂಪತ್ತು ಮತ್ತು ಐಶ್ವರ್ಯ ಇವುರಜತಪೀಠಪುರ ಅಥವಾ ಉಡುಪಿಯಲ್ಲಿ ವೃದ್ಧಿಯಾಗಲೆಂದು ದೇವರ್ಷಿಗಳೆಲ್ಲ ನಿನ್ನ ಮೇಲೆ ಹೂವನ್ನು ಮಳೆಯಂತೆ ಎರಚಲು, ಶ್ರೇಷ್ಠರಾದ ಇತರ ಋಷಿಗಳು ತಮ್ಮ ತಮ್ಮ ತಲೆಯನ್ನು (ಮೆಚ್ಚಿಗೆಯಿಂದ) ತೂಗುತ್ತಿರಲು ಗುರುವಾದ ವಾದಿರಾಜ ಸ್ವಾಮಿಗೆ ಒಲಿದ ಶ್ರೀ ಹಯವದನ ಸ್ವಾಮಿಯೆ ನಿನಗೆ ಜೋಗುಳವು.

ಕ್ಷೀರಸಮುದ್ರವನ್ನೇ ತೊಟ್ಟಿಲನ್ನಾಗಿ ಮಾಡಿಕೊಂಡು, ನಾಲ್ಕು ವೇದಗಳನ್ನೇ ಹಗ್ಗಗಳಂತೆ ಮಾಡಿಕೊಂಡು ಧೀರನಾದ ಶೇಷ ದೇವನು ಹಾಸಿಗೆ

ಯಾಗಲು, ರಮಾದೇವಿ (ಶ್ರೀದೇವಿ)ಯೊಂದಿಗೆ ಮಲಗಿದ ಹಯವದನ ಸ್ವಾಮಿಯೆ ನಿನಗೆ ಜೋಗುಳವು.

ವಿ. ವಿ :- ಪ್ರಳಯದಲ್ಲಿ ಎಲ್ಲವೂ ಜಲಮಯವಾಗುವುದು. ಸಮಸ್ತಜೀವಿಗಳೂ ಭಗವಂತನ ಹೃದಯದಲ್ಲಿ ಅಡಗುವುವು. ಆಗ ವಿಷ್ಣುವು ಕೆಲವು ಕಾಲ ಭೂದೇವಿಯು ತಾಳಿದ ಆಲದ ಎಲೆಯ ಮೇಲೆ ಶ್ರೀದೇವಿಯೊಂದಿಗೆ ಆದಿಶೇಷನನ್ನು ಹಾಸಿಗೆಯನ್ನಾಗಿ ಮಾಡಿಕೊಂಡು ಯೋಗನಿದ್ರಾಭಿಭೂತನಾಗಿದ್ದು ಪುನಃ ಸೃಷ್ಟಿಗೆ ತೊಡಗುವನು. ಆ ಸೃಷ್ಟಿಗೆ ದುರ್ಗಾದೇವಿಯು ಒತ್ತಾಸೆಯಾಗಿ ನಿಲ್ಲುವಳು.

## ಪ್ರಾಣದೇವರ ಮೇಲೆ ಜೋಗುಳ

೪೮ ರಾಗ-ಶಂಕರಾಭರಣ ತಾಳ-ಮಿ.ಛಾ.

**ಸೌಂದರ್ಯರೂಪದ ಶ್ರೀಮದಾನಂದ-ತಂದೆ ಹಯವದನನ-ಮೋಹದಕಂದ ।**
**ಬಂದು ಉಡುಪಿಯಲಿ ನೆಲೆಯಾಗಿ ನಿಂದ-ನೀ-ನಿದ್ರೆಯಮಾಡಯ್ಯ**
**ಹರಿಧ್ಯಾನದಿಂದ ಜೋ ಜೋ ॥**

ಸ. ಅ :- (ಎಲ್ಲರಿಗೂ) ಪಿತೃವಾಗಿರುವ ಹಯವದನಸ್ವಾಮಿಯ ಪ್ರೀತಿಪಾತ್ರ ಪುತ್ರನೆ, ಉಡುಪಿ ಎಂಬ ಮಹಾ ಕ್ಷೇತ್ರದಲ್ಲಿ ಸ್ಥಿರವಾಗಿ ನೆಲಸಿರುವವನೆ, ಸುಂದರಾಕಾರನಾದ ಶ್ರೀಮದಾನಂದನಾಮಕ ಗುರುವೆ ಹರಿಯನ್ನು ಧ್ಯಾನಿಸುತ್ತ ನಿದ್ದೆಮಾಡು, ಜೋಗುಳ ಪಾಡುತ್ತೇನೆ.

ವಿ. ವಿ :- ಉಡುಪಿ ಕ್ಷೇತ್ರಕ್ಕೆ 'ರಜತಪೀಠಪುರ'ವೆಂಬ ಹೆಸರೂ ಉಂಟು.

೪೯ ರಾಗ-ಆರಭಿ ತಾಳ-ಮಿ. ಛಾ.

**೧ ರತ್ನದಾರತಿಗೆ ಸುತ್ತ ಮುತ್ತನೆ ತುಂಬಿ । ಮುತ್ತೈದೆಯರೆಲ್ಲ ಧವಳದ ।**
**ಮುತ್ತೈದೆಯರೆಲ್ಲ ಧವಳದ ಪದವ ಪಾಡುತ್ತಲೆತ್ತಿರೆ ಶಿರಿವರಗೆ ॥ಶೋಭಾನೆ॥**
**೨ ಮುತ್ತೈದೆ ನಾರಿಯರು ಮುತ್ತಿನಾರತಿ ಮಾಡಿ। ಹತ್ತವತಾರ ಹಯವದನ।**
**ಹತ್ತವತಾರ ಹಯವದನ ದೇವಗೆ-ನವರತ್ನದಾರತಿಯ ಬೆಳಗಿರೆ ॥ಶೋಭಾನೆ॥**

ಸ. ಅ :- (ತಟ್ಟೆಯಲ್ಲಿ) ನಡುವೆ ರತ್ನಗಳನ್ನು ತುಂಬಿ, ಅವುಗಳ ಸುತ್ತ ಬೆಳ್ಳಗಿರುವ ಮುತ್ತನ್ನು ಅಳವಡಿಸಿ ಮುತ್ತೈದೆಯರಾದ ಸ್ತ್ರೀಯರೆಲ್ಲರು ಹಾಡುಗಳನ್ನು ಹಾಡುತ್ತ ಲಕ್ಷ್ಮೀಪತಿಯಾದ ಸ್ವಾಮಿಗೆ ಆರತಿಯನ್ನು ಎತ್ತಿರಿ, ಶುಭವಾಗಲಿ.

ವಿ. ವಿ. :-ಆರತಿ: ಶುಭಕರ್ಮಗಳಲ್ಲಿ ಉದ್ದಿಷ್ಟ ವ್ಯಕ್ತಿಗಳಿಗೆ ಶುಭವನ್ನು ಹಾರೈಸುತ್ತ ಅವರನ್ನು ಪೀಠದಲ್ಲಿ ಕುಳ್ಳಿರಿಸಿ, ತಟ್ಟೆಯಲ್ಲಿನ ಕುಂಕುಮಮಿಶ್ರಿತ ನೀರನ್ನು ಅವರ ಮುಂದೆ ನಿವಾಳಿಸಿ ಹೊರಕ್ಕೆ ಎರಚುವುದು ನಮ್ಮ ಹಿಂದುಗಳಲ್ಲಿ ನಡೆದು ಬಂದಿರುವ ಪದ್ಧತಿ. ಇದನ್ನೆ ಆರತಿ ಎತ್ತುವುದೆನ್ನುವರು. ದೇವದೇವನಿಗೆ ಮುತ್ತು-ರತ್ನಗಳಿಂದಲೆ ಆರತಿ ಎತ್ತುವುದುಂಟು.

ಮುತ್ತೈದೆ - ವೃದ್ಧಳಾದ ಸುಮಂಗಲಿ. ಧವಳ = ಬಿಳುಪು.

ನವರತ್ನಗಳು- ವಜ್ರ, ವೈಢೂರ್ಯ, ಗೋಮೇಧಿಕ, ಪುಷ್ಯರಾಗ, ಮರಕತ, ನೀಲ, ಮುತ್ತು, ಮಾಣಿಕ್ಯ (ಕೆಂಪು) ಮತ್ತು ಹವಳ.

## ಶ್ರೀಕೃಷ್ಣನ ಮೇಲಿನ ಮಂಗಳ

೫೦ ರಾಗ–ಭೈರವಿ ತಾಳ–ಖಂ. ಛಾ.

ಪಲ್ಲವಿ :- **ಜಯ ಮಂಗಳಂ ನಿತ್ಯ ಶುಭ ಮಂಗಳಂ ||**

ಅ. ಪ :- **ಮಂಗಳಂ ಕ್ಷೀರಸಾಗರ ಶಯನ ದೇವನಿಗೆ-ಮಂಗಳಂ ಬ್ರಹ್ಮಾದಿ ವಂದಿತನಿಗೆ |**
**ಮಂಗಳಂ ನಿತ್ಯ ಕರ್ಮದಿಂ ಸೇವಿತಗೆ–ಮಂಗಳಂ ಉಡುಪಿಯ ಶ್ರೀಕೃಷ್ಣಗೆ ||೧||**

ಚ. ೧ - **ನಂದನ ಕಂದನಿಗೆ ನವನೀತ ಚೋರನಿಗೆ–ವೃಂದಾರ ಕೇಂದ್ರ ಗೋವಿಂದಹರಿಗೆ |**
**ಇಂದಿರಾನಂದನಿಗೆ ಇಂದು ಸಮವಕ್ತ್ರಗೆ–ಮಂಥರಗಿರಿಧರ ಗೋವಿಂದ ಹರಿಗೆ ||೨||**

೨ - **ಮಕರಕುಂಡಲಧರಗೆ ರುಕುಮಿಣಿ ಅರಸಗೆ–ಅಕಳಂಕ ಮಹಿಮನಿಗೆ ಅಕುಟಿಲನಿಗೆ |**
**ಶುಕವಾಹನನ ಪಿತಗೆ ಭಕ್ತವತ್ಸಲನಿಗೆ ಅ–ಧಿಕ ಕೋಟಿ ರವಿತೇಜ ಮಕುಟವಿಶಿಷ್ಟವಗೆ ||೩||**

೩ - **ಸರಸ ಮಂದಹಾಸನಿಗೆ ನರಹರಿ ರೂಪನಿಗೆ ವರಕೌಸ್ತುಭಹಾರ ಧರಿಸಿದವನಿಗೆ |**
**ಕರುಣದಿಂ ಗೋಪಿಯರಘುಗದಿ ರಕ್ಷಿಪನಿಗೆ–ಶಿರಿಮುದ್ದು ಹಯವದನ ಮುರಹರನಿಗೆ ||೪||**

ಸ. ಅ :-ದಿನವೂ(ಸದಾ)ದೇವದೇವನಿಗೆಜಯಕರವೂ, ಶುಭಕರವೂ ಆದ ಮಂಗಳವಾಗಲಿ ಕ್ಷೀರಸಾಗರದಲ್ಲಿ ಮಲಗಿದವನೂ; ಬ್ರಹ್ಮಾದಿ ದೇವತೆಗಳಿಂದ ನಮಸ್ಕರಿಸಲ್ಪಟ್ಟವನೂ, ಉಷಃಕಾಲದಲ್ಲಿ ಎಚ್ಚರಗೊಳ್ಳುವ ಕಾಲದಿಂದ ರಾತ್ರೆ ನಿದ್ದೆ ಹೋಗುವವರಿವಿಗೆ ನಡೆಯುವ ಸಮಸ್ತವೈಭವೋಪಚಾರಗಳನ್ನು ಪಡೆಯುವವನೂ ಆದ ಉಡುಪಿ ಕ್ಷೇತ್ರದಲ್ಲಿ ನೆಲಸಿರುವ ಶ್ರೀಕೃಷ್ಣಸ್ವಾಮಿಗೆ ಯಾವಾಗಲೂ ಜಯಮಂಗಳವು, ಶುಭಮಂಗಳವು.

ನಂದನೆಂಬುವವನ ಮಗನೂ (ಸಾಕುಮಗ), ಬೆಣ್ಣೆಗಳ್ಳನೂ, ದೇವಶ್ರೇಷ್ಠನೂ, ಗೋ (ವೇದ) ರಕ್ಷಕನೂ, ಹರಿಯೂ; ಇಂದಿರಾದೇವಿ (ಲಕ್ಷ್ಮಿ)ಗೆ ಆನಂದವನ್ನುಂಟುಮಾಡುವವನೂ, ಚಂದ್ರಸದೃಶ ಮುಖವುಳ್ಳವನೂ, ಮಂದರಪರ್ವತವನ್ನೆತ್ತಿದ (ಕೂರ್ಮ) ಗೋವಿಂದನಿಗೂ ಸದಾ ಜಯಮಂಗಳವು ಹಾಗೂ ಶುಭಮಂಗಳವು.

ಮೊಸಳೆಯ ಆಕಾರದಂತೆ ತಯಾರಿಸಿದ ಕರ್ಣಾಭರಣಧಾರಿಯೂ; ರುಕ್ಮಿಣೀದೇವಿಯ ಗಂಡನೂ, ಕಳಂಕವಿಲ್ಲದ (ನಿಷ್ಕಲ್ಮಷವಾದ, ಮಹಿಮೆಯುಳ್ಳವನೂ ಯಾವವಿಧವಾದ ವಕ್ರತೆಯೂ (ಕಪಟಕೃತ್ಯಗಳು) ಇಲ್ಲದವನೂ, ಮನ್ಮಥನ ತಂದೆಯೂ, ಭಕ್ತರಲ್ಲಿ ವಾತ್ಸಲ್ಯವುಳ್ಳವನೂ, ಹೆಚ್ಚಾದ (ಅನೇಕ)

ಕೋಟಿ ಸೂರ್ಯರ ಬೆಳಕುಳ್ಳ ಕಿರೀಟವನ್ನು ಧರಿಸಿರುವ (ಉಡುಪಿಯ) ಕೃಷ್ಣನಿಗೆ ಯಾವಾಗಲೂ ಜಯಮಂಗಳವು, ಶುಭಮಂಗಳವು.

ರಸಪೂರ್ಣವಾದ ಮುಗುಳುನಗೆಯುಳ್ಳವನೂ, ನೃಸಿಂಹರೂಪಿಯೂ, ಶ್ರೇಷ್ಠವಾದ ಕೌಸ್ತುಭವೆಂಬ ಮಣಿಯ ಹಾರ ಧರಿಸಿರುವವನೂ, ದಯೆಯಿಂದ ಗೋಪಿಕಾ ಸ್ತ್ರೀಯರನ್ನು ಯುದ್ಧದಲ್ಲಿ ರಕ್ಷಿಸಿದವನೂ, ಸಂಪದ್ಯುಕ್ತನೂ ಮುದ್ದುಗಾರನೂ ಆದ ಹಯಮುಖದೇವ ಮುರಾರಿಗೆ ಸದಾ ಜಯಮಂಗಳವು ಶುಭಮಂಗಳವು.

ವಿ. ವಿ: ನಂದನಕಂದ:-ಜನ್ಮತಃ ಶ್ರೀಕೃಷ್ಣನು ಕಂಸನ ಕಾರಾಗೃಹದಲ್ಲಿ ಬದ್ಧರಾಗಿದ್ದ ವಸುದೇವ ದೇವಕಿಯರ ಪುತ್ರನೇ ಆದರೂ ಆತನ ನಿರ್ದೇಶನದಂತೆಯೇ ಗೋಕುಲದಲ್ಲಿನ ನಂದನೆಂಬುವವನ ಪೋಷಣೆಯಲ್ಲೇ ಬೆಳೆದನಾದುದರಿಂದ ನಂದನಕಂದನೆಂದು ಕರೆಸಿಕೊಂಡಿದ್ದಾನೆ.

ಮಂದರಗಿರಿಧರ:- ಸಮುದ್ರಮಥನಕ್ಕಾಗಿ ಮಂದರಪರ್ವತವನ್ನು ಬೆನ್ನಿನ ಮೇಲೆ ಹೊತ್ತಿದ್ದನು.

ಶುಕವಾಹನ:- ಶುಕ = ಗಿಳಿ (ಅದನ್ನು) ವಾಹನ-ವಾಹನವನ್ನಾಗಿ ಉಳ್ಳವ ಮನ್ಮಥ.

ಕೌಸ್ತುಭಹಾರ: ವಿಷ್ಣುವಿನ ಎದೆಯನ್ನಲಂಕರಿಸಿದ ರತ್ನವೇ ಕೌಸ್ತುಭವು. ಅದನ್ನು ಪೋಣಿಸಿರುವ ಹಾರವು ಕೌಸ್ತುಭ ಹಾರವು.

ಧುರದಿರಕ್ಷಿಪನಿಗೆ:- ಬಲರಾಮ-ಕೃಷ್ಣರು ಗೋಪಿಕೆಯರೊಂದಿಗೆ ವೃಂದಾವನದಲ್ಲಿ ವಿಹರಿಸುತ್ತಿದ್ದಾಗ ಕುಬೇರನ ಅನುಚರನಾದ 'ಶಂಖಚೂಡ'ನೆಂಬ ದಾನವನು ವೃಂದಾವನಕ್ಕೆ ಬಂದು ಗೋಪಿಕೆಯರನ್ನು ಅಪಹರಿಸತೊಡಗಿದ. ಕೂಡಲೆ ಬಲರಾಮ-ಕೃಷ್ಣರು ಅವನ ಬೆನ್ನುಹತ್ತಲು ಸ್ತ್ರೀಯರನ್ನು ಅಲ್ಲೇಬಿಟ್ಟು ಶಂಖಚೂಡನು ಪ್ರಾಣಭಯದಿಂದ ಓಡತೊಡಗಿದ. ಬಲರಾಮನನ್ನು ಗೋಪಿಕೆಯರ ರಕ್ಷಣೆಗಾಗಿ ನಿಲ್ಲಿಸಿ ಕೃಷ್ಣನು ಶಂಖಚೂಡನನ್ನು ಹಿಂಬಾಲಿಸಿ ಹಿಡಿದು ಹೊಡೆದು ಕೊಂದು ಅವನ ತಲೆಯಲ್ಲಿದ್ದ ಅನರ್ಘ್ಯ ಮಣಿಯನ್ನು ತಂದನಂತೆ ಇದೇ ಆ ಧುರದ ಪ್ರಕರಣ.

## ಪ್ರಾಣದೇವರ ಮೇಲಿನ ಮಂಗಳ

೫೧ ರಾಗ ಭೈರವಿ ತಾಳ-ಮಿ. ಛಾ.

ಪಲ್ಲವಿ :- ಮಂಗಳ ಮುಖ್ಯಪ್ರಾಣೇಶಗೆ ಜಯ ಮಂಗಳ ಭಾರತೀರಮಣನಿಗೆ ।

ಚ. ೧ :- ಅಂಜನಾದೇವಿಯ ಕಂದಗೆ ಮಂಗಳ–ಕಂಜಾಕ್ಷ ಹನುಮಗೆ ಜಯಮಂಗಳ ।
ಸಂಜೀವನನ ತಂದಾತಗೆ ಮಂಗಳ–ಸುಜನರ ಪರಿಪಾಲಗೆ ಮಂಗಳ ॥೧॥
ಅತಿಬಲವಂತಭೀಮಸೇನಗೆ ಮಂಗಳ–ಅಪ್ರತಿಮಮಲ್ಲರ ಗೆಲಿದಗೆ ಮಂಗಳ ।
ಸತಿಯ ಸೀರೆಯ ಸೆಳೆದ ದೈತ್ಯರ ಕೊಂದವಗೆ-ಪೃಥಿವೀಲಿ ಚೆಂಡಾಡಿದಗೆ ಮಂಗಳ॥೨॥
ಸೀತಾದೇವಿಯ ಬಾಲಗೆ ಮಂಗಳ–ಶ್ರೀರಾಮರ ಭಂಟಗೆ ಮಂಗಳ ।
ಗೋಪಾಲಕೃಷ್ಣನ ಪೂಜೆಯ ಮಾಡುವ–ಗುರುಮಧ್ವ ಮುನಿರಾಯಗೆ ಮಂಗಳ ॥೩॥

ಸ. ಅ :- ಮುಖ್ಯಪ್ರಾಣೇಶನಾದ ವಾಯುದೇವನಿಗೆ, ಭಾರತೀದೇವಿಯ ನಿಯತಪತಿಗೆ ಮಂಗಳವು.

ಅಂಜನೆ ಎಂಬುವವಳ ಮಗನೂ, ಕಮಲನೇತ್ರನೂ ಆದ ಹನುಮಂತನಿಗೆ ಮಂಗಳವು. ಸಂಜೀವನವನ್ನು (ಹೋದ ಪ್ರಾಣವನ್ನು ಮತ್ತೆ ಬರಿಸಬಲ್ಲ ಸತ್ವವುಳ್ಳ ಮೂಲಿಕೆಯನ್ನು) ತಂದವನೂ ಸತ್ಪುರುಷರ ರಕ್ಷಕನೂ ಆದ ಆಂಜನೇಯನಿಗೆ ಮಂಗಳವು.

ಬಲವುಳ್ಳವನಾದ ಭೀಮಸೇನನಿಗೆ; ತಮಗೆ ಇದಿರೇ ಇಲ್ಲವೆಂದು ಮಲೆತಿದ್ದ ಬಕ, ಹಿಡಿಂಬ, ಕೀಚಕ, ಮೊದಲಾದ ರಕ್ಕಸರನ್ನು ಗೆದ್ದದವನಿಗೆ; ತನ್ನ ಪತ್ನಿಯ ಸೀರೆಯನ್ನು (ಸಭೆಯಲ್ಲಿ) ಎಳೆದ ದುಶ್ಶಾಸನನೇ ಮೊದಲಾದ ರಕ್ಕಸರನ್ನು ಕೊಂದು ಭೂಮಿಯ ಮೇಲೆ ಅವರೆಲ್ಲರ ಶಿರಸ್ಸನ್ನು ಚೆಂಡಿನಂತೆ ಉರುಳಾಡಿಸಿದ ಭೀಮಸೇನನಿಗೆ ಮಂಗಳವು.

ಸೀತಾದೇವಿಗೆ ಪುತ್ರಪ್ರಾಯನೂ, ಶ್ರೀರಾಮನ ಅವಿಚ್ಛಿನ್ನ ಸೇವಕನೂ; ಶ್ರೀ ಗೋಪಾಲಕೃಷ್ಣ ದೇವರನ್ನು (ಅನವರತ) ಪೂಜೆ ಮಾಡುವ ಗುರುವೂ ಆದ ಶ್ರೀ ಮಧ್ವಮುನಿಗಳಿಗೆ ಮಂಗಳವು.

ವಿ. ವಿ :- ಈ ಹಾಡಿನಲ್ಲಿ ಆಂಜನೇಯ, ಭೀಮಸೇನ ಮತ್ತು ಮಧ್ವಾಚಾರ್ಯ-ಇವರುಗಳಿಗೆ ಮಂಗಳವನ್ನು ಹಾಡಲಾಗಿದೆ, ವಾಯುದೇವನು ಬೇರೆ-ಬೇರೆ ಯುಗಗಳಲ್ಲಿ ಎತ್ತಿದ್ದ ಅವತಾರಗಳೇ ಈ ಮೂರು.

ಆಂಜನಾದೇವಿಯಕಂದ :- ಪುಂಜಿಕಸ್ಥಲಿಯೆಂಬುವವಳೊಬ್ಬಳು ಅಪ್ಸರಸ್ತ್ರೀ. ಆಕೆಯು ಶಾಪದಿಂದ ವಾನರ ಜನ್ಮವನ್ನು ಪಡೆದಳು. ಕೇಸರಿ ಎಂಬ ಕಪಿನಾಯಕನು ಆಕೆಯನ್ನು ಮದುವೆಯಾದನು. ಅಂಜನಿಯು ವನದಲ್ಲಿ ವಿಹರಿಸುತ್ತಿರುವಾಗ ಒಮ್ಮೆ ವಾಯುದೇವನು ಆಕೆಯ ಸೌಂದರ್ಯಕ್ಕೆ ಮನಸೋತನು. ಆತನ ಅನುಗ್ರಹದಿಂದ ಅಂಜನಿಯಲ್ಲಿ ಜನಿಸಿದ ಪುತ್ರನೇ ಆಂಜನೇಯನು. [ರಾ ಕಿಷ್ಕಿಂ-೬೬] ಹೀಗೆ ಆಂಜನಾದೇವಿಯ ಕಂದನಾದುದು.

ಸಂಜೀವನವ ತಂದಾತ : ರಾಮರಾವಣರ ಯುದ್ಧದಲ್ಲಿ ಲಕ್ಷ್ಮಣನು ರಾವಣನು ಪ್ರಯೋಗಿಸಿದ ಶಕ್ತ್ಯಾಯುಧದಿಂದ ನಿಶ್ಚೇತನನಾಗಿ ಬಿದ್ದನು, ಆಗ ಸುಷೇಣನೆಂಬ ಕಪಿವೈದ್ಯನು ಸಂಜೀವನ ಮೂಲಿಕೆಯನ್ನು ತರುವಂತೆ ಹೇಳಲು ಆಂಜನೇಯನು ಮೂಲಿಕೆಯನ್ನು ತರಲು ಹೋಗಿ ಕೊನೆಗೆ ಆ ಮೂಲಿಕೆ ಇದ್ದ ಪರ್ವತಖಂಡವನ್ನೇ ಕಿತ್ತುತಂದು ಲಕ್ಷ್ಮಣನ ಪುನಃಶ್ಚೇತನಕ್ಕೆ ಕಾರಣನಾದನು.

## ಶ್ರೀ ವಾದಿರಾಜರ ಮೇಲಿನ ಮಂಗಳ

೫೨ ರಾಗ–ಭೈರವಿ ತಾಳ–ಖಂ. ಛಾ.

ಅ. ಪ :- ಮಂಗಳಂ ಹಯವದನ ಪದಕಂಜ ಮಧುಪಗೆ–
ಮಂಗಳಂ ವಾಗ್ವಜ್ರಧಾರನಿಗೆ ||
ಮಂಗಳಂ ವಾಗೀಶಕರಕಂಜ ಜಾತನಿಗೆ–ಮಂಗಳಂ ಗುರು
ವಾದಿರಾಜರಾಯರಿಗೆ||
ಜಯಮಂಗಳಂ–ನಿತ್ಯ ಶುಭಮಂಗಳಂ ||ಪಲ್ಲ||

ಚ. ೧ - ಮಂಜುಳಾಕಾರನಿಗೆ–ಮಹಿತಗುಣವಂತನಿಗೆ – ಕಂಜದಳನೇತ್ರನಿಗೆ–
ಕಾಮಾರಿಗೆ ।
ಅಂಜನಿಯ ಸುತಮತಗೆ–ಅನುಕೂಲವಾದವಗೆ ರಂಜಿಸಿ
ಮುನಿವರ್ಯರಾಳ್ದ ಯತಿಧೀರಗೆ ॥೧॥
೨ - ಪರಿ ಪರಿ ಚರಿತ್ರನಿಗೆ–ಪರಿಪೂರ್ಣಚಿತ್ಸುಖಗೆ–ಪರಮ ಹಂಸಾಚಾರ್ಯ
ಪದವೀವಗೆ ।
ಶರಣಜನಪಾಲಕಗೆ–ಸದ್ಧರ್ಮ ನಿರತನಿಗೆ-ಉರಗಭೂಷಣನಂತೆ
ಉರ್ವಿಯೊಳು ಪೂಜ್ಯನಿಗೆ ॥೨॥
೩ - ವಿದ್ವದಾಧಾರನಿಗೆ-ವಿಜಿತಾರಿವರ್ಗನಿಗೆ-ಅದ್ವೈತತಮಹರಗೆ-ಆಶ್ಚರ್ಯಗೆ
ಊರ್ಧ್ವಪುಂಡ್ರಾಂಕಿತಗೆ–ಉತ್ಕೃಷ್ಟತೇಜನಿಗೆ–ಮುದ್ದು
ಹಯವದನನ್ನ ಮುದದಿ ಪೂಜಿಪಗೆ ॥೩॥

ಸ. ಅ :- ಹಯವದನ ಸ್ವಾಮಿಯ ಕಮಲಸದೃಶ ಪಾದಗಳಲ್ಲಿ ದುಂಬಿಯಂತೆ ವಿಹರಿಸುವನೂ, ವಜ್ರಧಾರೆಯಂತೆ ಹರಿತವಾದ (ಸಂಶಯವಿಲ್ಲದೆ ದೃಢವಾದ) ಮಾತನ್ನು ಉಳ್ಳವನೂ ಆದ ಶ್ರೀ ವಾದಿರಾಜನಿಗೆ ಜಯಮಂಗಳವು ಸದಾ ಶುಭಮಂಗಳವು.

ಚ. ೧ :- ಮನೋಹರವಾದ ರೂಪವುಳ್ಳವನಾದ, ಅತ್ಯಂತ ಹಿರಿಯ ಗುಣವುಳ್ಳವನಾದ ಕಮಲದಳದಂತೆ ವಿಶಾಲವಾದ ಕಣ್ಣುಗಳುಳ್ಳವನಾದ, ಮನ್ಮಥನಿಗೆ ಶತ್ರುವಾದ, ಅಂಜನೀದೇವಿಯ ಮಗನಾದ ಆಂಜನೇಯನ ಮತಾನುಯಾಯಿಯಾದವನಿಗೆ ಸಹಾಯಕನಾದ, ಋಷಿಶ್ರೇಷ್ಠರುಗಳಿಗೆ ಸಂತೋಷವನ್ನುಂಟುಮಾಡಿ ಅವರನ್ನು ರಕ್ಷಿಸಿದ ಧೀರನಾದ ವಾದಿರಾಜಸ್ವಾಮಿಗೆ ಜಯಮಂಗಳವು ಸದಾ ಶುಭಮಂಗಳವು.

ಬಗೆ ಬಗೆಯ ಕಥಾವೃತ್ತವುಳ್ಳವನಾದ, ಸಂಪೂರ್ಣ ಆತ್ಮಜ್ಞಾನಿಯಾದ, ಅತ್ಯಂತ ಶ್ರೇಷ್ಠವಾದ ಸನ್ಯಾಸದೀಕ್ಷೆಯನ್ನು ಕೊಡಲು ತಕ್ಕವನಾದ, ಚರಣಾಶ್ರಿತರ ರಕ್ಷಕನಾದ, ಸಮೀಚೀನವಾದ ಧರ್ಮಮಾರ್ಗದಲ್ಲೇ ನಿರತನಾದ, ಸರ್ಪಭೂಷಣನಾದ ಶಂಕರನಂತೆ ಲೋಕಪೂಜ್ಯನಾದ ವಾದಿರಾಜ ಯತೀಶ್ವರನಿಗೆ ಜಯಮಂಗಳವು ಸದಾ ಶುಭಮಂಗಳವು.

ವಿದ್ವತ್ತಿಗೆ (ಜ್ಞಾನಕ್ಕೆ) ಆಧಾರನಾದ, ಜಯಿಸಲ್ಪಟ್ಟ ಶತ್ರುಗಳ ಸಮೂಹವುಳ್ಳವನಾದ, ಅದ್ವೈತ (ಮತ) ವೆಂಬ ಕತ್ತಲೆಯನ್ನು ಹೋಗಲಾಡಿಸುವವನಾದ, ಆಶ್ಚರ್ಯಕಾರಕನಾದ, ಊರ್ಧ್ವಪುಂಡ್ರಧಾರಿಯಾದ, ಶ್ರೇಷ್ಠವಾದ ಕಾಂತಿಯುಳ್ಳವನಾದ, ಮುದ್ದಾದ (ಸುಂದರನಾದ) ಹಯಮುಖ ದೇವನನ್ನು ಸಂತೋಷದಿಂದ ಆರಾಧಿಸುವ ಶ್ರೀ ವಾದಿರಾಜಗುರುವಿಗೆ ಜಯಮಂಗಳವು. ಸದಾ ಸುಭಮಂಗಳವು.

ವಿ. ವಿ :- ವಾಗ್ವಜ್ರಧಾರನಿಗೆ—ವಜ್ರಧಾರೆಯಂತೆ ಬಹು ತೀಕ್ಷ್ಣವಾದ ವಾಗ್ಝರಿಯುಳ್ಳವರು ಆವರಿಗೆ.

ವಾಗ್ವಜ್ರ :- 'ವಿಶ್ವಂ ಸತ್ಯಂ ಹರಿಃ ಕರ್ತಾ ಜೀವೋನ್ಯಃ ಪರಮಾರ್ಥತಃ | ವೇದ ಸ್ಸತ್ಯಂ ಪುರಾಣಂಚ'...... ಎಂದರೆ ಪ್ರಪಂಚವು ಸತ್ಯ, ಶ್ರೀಹರಿಯೆ ಸೃಷ್ಟ್ಯಾದ್ಯಷ್ಟ ಕರ್ತೃವು, ಜೀವನು ಪರಮಾತ್ಮನಿಂದ ಪಾರಮಾರ್ಥಿಕ ಭೇದವುಳ್ಳವನು, ವೇದ ಮತ್ತು ಪುರಾಣಗಳು ಸತ್ಯ........... ಈ ರೂಪವಾದ ವಾಕ್ಯಗಳೆಂಬ ವಜ್ರಗಳನ್ನು ಧರಿಸಿರುವವನು.

ಊರ್ಧ್ವಪುಂಡ್ರಾಂಕಿತ :- ಪುಂಡ್ರವೆನ್ನುವುದು ಪ್ರಕೃತ ನಮ್ಮ ಹಿಂದುಗಳಲ್ಲಿ ಕರ್ಮಶೀಲರಾದವರು ತಮ್ಮ-ತಮ್ಮ ಮತದ ಗುರುತಿಗಾಗಿ ಆಯಾ ಆಚಾರ್ಯರುಗಳಿಂದ ನಿರ್ದೇಶನ ಮಾಡಲ್ಪಟ್ಟಿರುವ ಕ್ರಮದಲ್ಲಿ ಹೊಟ್ಟೆ, ತೋಳುಗಳು, ಹಣೆ ಮೊದಲಾದ ಭಾಗಗಳ ಮೇಲೆ ಹಚ್ಚಿಕೊಳ್ಳುವ ಚಿಹ್ನೆಗಳು. ಇದಕ್ಕಾಗಿ ವಿಭೂತಿ (ಭಸ್ಮ), ಬಿಳಿಯ ನಾಮ, ಶ್ರೀಚೂರ್ಣ, ಕುಂಕುಮ ಗೋಪೀಚಂದನ ಮೊದಲಾದ ಪದಾರ್ಥಗಳನ್ನು ಬಳಸುವರು. ಪ್ರಾಯಶಃ ಭಸ್ಮವನ್ನು ಧರಿಸುವವರು ಅಡ್ಡರೇಖೆಗಳಿಂದಲೂ, ಉಳಿದವರು ಮೇಲುಮುಖವಾಗಿಯೂ ಗುರುತಿಸಿಕೊಳ್ಳವರು. ಹೀಗೆ ಮೇಲುಮುಖವಾಗಿ ಗುರುತಿಸಿಕೊಳ್ಳುವುದೇ ಊರ್ಧ್ವಪುಂಡ್ರವು.

ಮಾಧ್ವರು ಪುಂಡ್ರಧಾರಣೆಗೆ ಉಪಯೋಗಿಸುವುದು ಗೋಪೀಚಂದನವು ಇದು. ಮಾಸಲು ಹಳದಿ ಮಿಶ್ರಿತ ನಸುಬಿಳುಪಿನ ಬಣ್ಣದ ಒಂದು ಬಗೆಯ ಜಿಗುಟು ಮಣ್ಣು. ಇದು ಗುಜರಾತ್ ಪ್ರಾಂತಕ್ಕೆ ಸೇರಿದ ದ್ವಾರಕೆಯ ಸಮೀಪದ ಗೋಪೀಸರೋವರ, ವಾಸುದೇವ ಹ್ರದ ಎಂಬಲ್ಲೂ; ದ್ವಾರಕೆಗೆ ೧೪ ಮೈಲಿ ದೂರದಲ್ಲಿರುವ 'ಗೋಪೀತಾಲಾಬ್' ಎಂಬಲ್ಲೂ ದೊರಕುವುದು. ಗೋಪೀತಾಲಾಬ್ ಎಂಬಲ್ಲಿ 'ಗೋಪೀನಾಥನ' ದೇವಾಲಯವೂ ಇದೆ. ಗೋಪೀಚಂದನದ ಮಹಿಮೆಯನ್ನು ಕುರಿತು ಶ್ರೀ ವಾದಿರಾಜ ಸ್ವಾಮಿಗಳು:-

ಫಾಲೇ ಯಲ್ಲಿಖಿತಂ ಧುನೋತಿ ವಿವಿಧಾಂ ರೇಖಾಂ ವಿಧಾತ್ರಾ ಕೃತಾಮ್ |
ಲೀಲಾರ್ಥಂತಿಲಕೀಕೃತಂ ವಿತನುತೇ ವಿದ್ವಲ್ಲಲಾಮಾಯಿತಾನ್ |
ಊರ್ಧ್ವಂ ಯದ್ಧೃತಮುಚ್ಚಲೋಕಪದ ಸೋಪಾನಮನ್ವೇತಿ ತದ್-
ಗೋಪೀಚಂದನ ಮಂಜಸಾ ವಿಜಯತೇ ತಾಪತ್ರಯಧ್ವಂಸನಮ್ || ಎಂದರೆ

ಯಾವುದನ್ನು ಹಣೆಗೆ ಹಚ್ಚಿಕೊಳ್ಳುವುದರಿಂದ ಬ್ರಹ್ಮನು ಬರೆದ ವಿವಿಧ ಬರೆಹವನ್ನೂ ನಾಶಗೊಳಿಸಬಲ್ಲುದೊ, ತಿಲಕವಾಗಿ ಹಚ್ಚಿಕೊಂಡಲ್ಲಿ ಆತನಿಗೆ ಮಹಾಜ್ಞಾನವನ್ನು ಕೊಟ್ಟು ವಿದ್ವಾಂಸನನ್ನಾಗಿ ಮಾಡಬಲ್ಲುದೊ, ಮೇಲುಮುಖವಾಗಿ ಹಚ್ಚಿಕೊಂಡಲ್ಲಿ ಶ್ರೇಷ್ಠಲೋಕದ (ವೈಕುಂಠದ) ಪದವಿಗೆ ಏರಲು ಮೆಟ್ಟಿಲಿನಂತೆ ಮಾರ್ಗದರ್ಶನ ಮಾಡಬಲ್ಲುದೊ, ಅಂತಹ, ತ್ರಿತಾಪಹಾರಕವಾದ ಗೋಪೀಚಂದನದ ಮಹಿಮೆಯು ಜಯಿಸಲಿ (ಸರ್ವತ್ರ ಪ್ರಚಾರಕ್ಕೆ ಬರಲಿ) ಎಂದು ಬಣ್ಣಿಸಿದ್ದಾರೆ. ಈ ಅಂಶಗಳ ಸ್ಥಿರೀಕರಣಕ್ಕಾಗಿ-

ದ್ವಾರಾವತ್ಯಾಂ ಶುಭೇ ರಮ್ಯೇ-ವಾಸುದೇವಹ್ರದೇ ತಥಾ |
ತತ್ರೋದ್ಧೃತಾಂ ಮೃದಂ ಶುಭ್ರಾಂ-ಆದಾಯ ದ್ವಿಜಸತ್ತಮಃ |
ಧಾರಯೇದೂರ್ಧ್ವಪುಂಡ್ರಾಣಿ ಸರ್ವಕಾಮಫಲಾಪ್ತಯೇ |

ಊರ್ಧ್ವಪುಂಡ್ರಧರೋ ವಿಪ್ರಃ-ಸರ್ವಲೋಕೇ ಪಿ ಪೂಜಿತಃ ।
ಸವಿಮಾನಂ ಸಮಾರುಹ್ಯ-ಯಾತಿ ವಿಷ್ಣೋಃಪದಂ ಪರಮ್ ॥

ಎಂಬ ಪುರಾಣ ವಾಕ್ಯಗಳೂ ಶ್ರೀವಾದಿರಾಜಕೃತ ತೀರ್ಥ ಪ್ರಬಂಧದಲ್ಲಿ ಉಂಟು. ಇಷ್ಟು ಬಗೆಯಲ್ಲಿ ಕೊಂಡಾಡಲ್ಪಟ್ಟಿರುವ ಗೋಪೀಚಂದನದ ಧಾರಣೆಗೆ ಹೇಳಲ್ಪಟ್ಟಿರುವ ವಿವರಣೆಯು ಹೀಗಿದೆ :-

ಪುಂಡ್ರವನ್ನು ಸದಾ ಮೇಲುಮುಖವಾಗಿಯೇ ಹಚ್ಚಿಕೊಳ್ಳಬೇಕು. ಆದುದರಿಂದಲೇ ಅದು ಊರ್ಧ್ವಪುಂಡವೆನ್ನಲ್ಪಟ್ಟಿತು.

ಗೋಪೀಚಂದನ ಪಾಪಘ್ನ-ವಿಷ್ಣುದೇಹ ಸಮುದ್ಭವ ।
ಚಕ್ರಾಂಕಿತ ನಮಸ್ತೇಸ್ತು-ಧಾರಣಾನ್ಮುಕ್ತಿದೋಭವ ॥ ಎಂದು ಮಂತ್ರ ಹೇಳಿ-

ಎಡದ ಕೈಯಲ್ಲಿ ಶಾಲಿಗ್ರಾಮತೀರ್ಥವನ್ನು ಧರಿಸಿ, ಗೋಪೀಚಂದನವನ್ನು ಅದರಲ್ಲಿ ತೇಯ್ದು ಗಾಯತ್ರಿ ಮಂತ್ರಪೂರ್ವಕ ನಾಸಾದಿಕೇಶ ಪರ್ಯಂತ ಹಣೆಯಲ್ಲಿ ನಾಮ ಹಚ್ಚಿಕೊಂಡು, ಉದರ ಮಧ್ಯದಲ್ಲಿ ೧೦ ಅಂಗುಲ, ಎದೆ ೨ ಅಂಗುಲ, ಎದೆಯ ಮೇಲೆ ಕಂಠದ ೪ ಅಂಗುಲ, ಹೊಟ್ಟೆಯ ಬಲಪಾರ್ಶ್ವ ೧೦ ಅಂಗುಲ, ಬಲಭುಜ ೮ ಅಂಗುಲ, ಕಂಠ ಬಲಪಾರ್ಶ್ವ ೪ ಅಂಗುಲ, ಹೊಟ್ಟೆಯ ಎಡಪಾರ್ಶ್ವ ೧೦ ಅಂಗುಲ, ಎಡಭುಜ ೮ ಅಂಗುಲ, ಕಂಠದ ಎಡಪಾರ್ಶ್ವ ೪ ಅಂಗುಲ, ಬೆನ್ನಿನ ಕೆಳಭಾಗ ೨ ಅಂಗುಲ, ಕಂಠದ ಹಿಂಬದಿ ೨ ಅಂಗುಲ, ಶಿರಸ್ಸು ೫ ಅಂಗುಲ, ಬಲದ ಸ್ತನದ ಮೇಲಿಂದ ೬ ಅಂಗುಲ ಈ ಪ್ರಕಾರ ಕೇಶವಾದಿ ನಾಮೋಚ್ಚಾರಣೆ ಮಾಡಿಕೊಂಡು ಧರಿಸಬೇಕು. ಹಣೆಯಲ್ಲಿ ಧರಿಸಿದ ಪುಂಡ್ರವು ಮಧ್ಯೆ ಛಿದ್ರವಾಗುವಂತೆ ಬೆರಳಿನಿಂದ ತಿದ್ದಿಕೊಳ್ಳಬೇಕು.

೧ ಮುದ್ರಾಧಾರಣೆ:- ಚಕ್ರಮುದ್ರೆಯಿಂದ ಬಲಕೆನ್ನೆಗೆ ೧, ಹೃದಯಕ್ಕೆ ೩, ಉದರಕ್ಕೆ ೫, ಬಲಭಾಗಕ್ಕೆ ೨, ಎದೆಯ ಬಲಭಾಗಕ್ಕೆ ೩, ಬಲಭುಜದ ನಾಮದ ಮೇಲೆ ೨, ಎಡಭುಜದ ನಾಮದ ಕೆಳಗೆ ೧, ಬಲಕಿವಿಕೆಳಗೆ ೧, ಕಂಠಕ್ಕೆ ೧.

೨ ಶಂಖಮುದ್ರೆಯಿಂದ :- ಎಡದ ಕೆನ್ನೆಗೆ ೧, ಹೊಟ್ಟೆಯ ಎಡಗಡೆಗೆ ೨, ಎದೆಯ ಎಡಭಾಗ ೨, ಎಡಭುಜದ ನಾಮದ ಮೇಲೆ ೨, ಬಲಭುಜದ ನಾಮದ ಕೆಳಗೆ, ೧, ಎಡಗಿವಿಯ ಕೆಳಗೆ ೧.

೩ ಗದಾಮುದ್ರೆ :- ಹಣೆಗೆ ೧, ಹೊಟ್ಟೆಯ ಮತ್ತು ಎದೆಯ ಎಡಭಾಗಗಳಿಗೆ ೧-೧, ಎಡಭುಜದ ನಾಮದ ಕೆಳಗೆ ೨.

೪ ಪದ್ಮಮುದ್ರೆ :- ಎದೆಗೆ ೧, ಹೊಟ್ಟೆಯ ಮತ್ತು ಎದೆಯ ಬಲಭಾಗಗಳಿಗೆ ೧-೧, ಬಲಭುಜದ ನಾಮದ ಕೆಳಗೆ ೨.

೫ ನಾರಾಯಣ ಮುದ್ರೆ :- ಈ ಮುದ್ರೆಯನ್ನು ಸರ್ವತ್ರ ಹಚ್ಚಿಕೊಳ್ಳಬೇಕು.

ಸೂ : ಗೋಪೀಚಂದನವನ್ನೂ ಮುದ್ರೆಯನ್ನೂ ಬರಿಯ ನೆಲದ ಮೇಲೆ ಇಡಬಾರದು. ಮುದ್ರೆಯನ್ನು ತೊಳೆದು ಶಿರಸ್ಸಿಗೆ ಪ್ರೋಕ್ಷಿಸಿಕೊಳಬೇಕು. ಗೋಪೀಚಂದನದ ಕೈಯನ್ನು ನೆಲಕ್ಕೆ ತೊಳೆಯಬಾರದು.

ಇದು ದ್ವಾದಶ ಪುಂಡ್ರಧಾರಣವಿಧಿ

# ದೇವರಲ್ಲಿ ವಾದಿರಾಜರ ಬೇಡಿಕೆ

೫೩ ರಾಗ–ಆರಭಿ ತಾಳ–ಮಿ. ಛಾ.

**ಹಯವದನ ತನ್ನ ಪ್ರಿಯಳಾದ ಲಕ್ಷುಮಿಗೆ ಜಯವಿತ್ತ ಕ್ಷೀರಾಂಬುಧಿಯಲ್ಲಿ**
**ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ ದಯದಿ ನಮ್ಮೆಲ್ಲರ ಸಲಹಲಿ**
**||ಸೋಬಾನೆ||**

ಸ. ಅ :- ಹಯಮುಖದೇವನು ಕ್ಷೀರ ಸಮುದ್ರದಲ್ಲಿ (ಹುಟ್ಟಿಬಂದ) ತನ್ನ ಪ್ರೇಯಸಿಯಾದ ಲಕ್ಷ್ಮೀದೇವಿಗೆ [ಆಕೆಯನ್ನು ಪರಿಗ್ರಹಿಸಿ] ಜಯವನ್ನು ಕರುಣಿಸಿದನು. ಹಾಗೆ ಕರುಣಿಸಿದ ಶ್ರೀಕೃಷ್ಣನು ಕೃಪೆಯಿಂದ ನಮ್ಮೆಲ್ಲರನ್ನೂ ಪೊರೆಯಲಿ, ಶುಭವಾಗಲಿ.

ವಿ. ವಿ :- ಹಯವದನ ಹಯಗ್ರೀವನೆಂಬುದು ವಿಷ್ಣುವಿನ ನಾಮಾಂತರ. ಲಕ್ಷ್ಮಿಯೊಂದಿಗೆ ಕ್ರೀಡೆಯಲ್ಲಿದ್ದಾಗ ಒಮ್ಮೆ ವಿಷ್ಣುವು ನಕ್ಕನಂತೆ. ಕೋಪಗೊಂಡ ಲಕ್ಷ್ಮಿಯು ವಿಷ್ಣುವಿನತಲೆ ಉರುಳುವಂತೆ ಶಾಪವಿತ್ತಳಂತೆ. ಕೆಲವು ಕಾಲಾನಂತರ ವಿಷ್ಣುವು ಆದಿಶೇಷನ ಮೇಲೆ ಮಲಗಿ ತನ್ನ ಶಾರ್ಙ್ಗವೆಂಬ ಬಿಲ್ಲನ್ನೇ ತಲೆದಿಂಬಾಗಿಟ್ಟುಕೊಂಡು ನಿದ್ರಿಸುತ್ತಿರಲು, ಮಧು ಕೈಟಭರೆಂಬ ರಾಕ್ಷಸರು (ಇವರು ವಿಷ್ಣುವಿನ ಕರ್ಣಮಲ ಸಂಭೂತರು) ಲೋಕ ಕಂಟಕರಾಗಲು ನಿದ್ರಿಸುತ್ತಿದ್ದ ವಿಷ್ಣುವನ್ನು ಎಚ್ಚರಗೊಳಿಸಲು ದೇವತೆಗಳು ಗೆದ್ದಲು ಹುಳುಗಳನ್ನು ಸೃಷ್ಟಿಸಿ ತಲೆಯ ಅಡಿಯಲ್ಲಿದ್ದ ಬಿಲ್ಲಿನ ನಾರಿಯನ್ನು ಕತ್ತರಿಸುವಂತೆ ಪ್ರೇರಿಸಲು ಅವುಗಳ ಕಡಿತದಿಂದ ಹಗ್ಗವು ಛಿದ್ರವಾಗಿ ಕಟ್ಟಿದ್ದ ಬಿಲ್ಲು ವಿಷ್ಣುವಿನ ತಲೆಯನ್ನೇ ಕತ್ತರಿಸಿತಂತೆ ಆಗ ದೇವತೆಗಳೆಲ್ಲ ಸೇರಿ ಒಂದು ಕುದುರೆಯ ರುಂಡವನ್ನು ವಿಷ್ಣುವಿನ ಮುಂಡಕ್ಕೆ ಸೇರಿಸಲು ಹಯವದನ ಮೂರ್ತಿಯ ಜನ್ಮವಾಯಿತಂತೆ. [ದೇ. ಬಾ. ೧-೫; ಭಾ-ಉ-೧೩೦]

**ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾವಾ**
**ಅನುಸೃತ ಸ್ವಭಾವಾತ್ ।**
**ಕರೋಮಿಯದ್ಯತ್ ಸಕಲಂಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ।**

ಸ. ಅ :- ಶರೀರದಿಂದ, ಮಾತಿನಿಂದ, ಮನಸ್ಸಿನಿಂದ, ಇಂದ್ರಿಯಗಳಿಂದಲಾಗಲೀ ಅನುಸರಿಸಿ ಬಂದ ಸ್ವಭಾವದಿಂದಲಾಗಲೀ ಏನೇನು ಮಾಡುತ್ತೇನೊಅವೆಲ್ಲವನ್ನೂ ಪರಾತ್ಪರನಿಗೆ ನಾರಾಯಣನಿಗೆ, ಎಂಬುದಾಗಿ (ಹೃತ್ಪೂರ್ವಕವಾಗಿ ಸಮರ್ಪಿಸುತ್ತೇನೆ.

ವಿ. ವಿ :- [ಕಾಯೇನ = ಶರೀರದಿಂದ, ವಾಚಾ – ಮಾತಿನಿಂದ, ಮನಸಾ = ಮನಸ್ಸಿನಿಂದ, ಇಂದ್ರಿಯೈಃ ಪಂಚಕರ್ಮೇಂದ್ರಿಯಗಳು ಹಾಗೂ ಪಂಚಜ್ಞಾನೇಂದ್ರಿಯಗಳು ಇವುಗಳಿಂದ ವಾ–ಆಗಲಿ; ಬುದ್ಧ್ಯಾ - ಬುದ್ಧಿಯಿಂದ, ಆತ್ಮನಾ–ಆತ್ಮನಿಂದ ವಾ–ಅಥವಾ ಅನುಸೃತ–ಅನುಸರಿಸಿಕೊಂಡು ಬಂದ ಸ್ವಭಾವಾತ್–ಸ್ವಭಾವದಿಂದಲಾಗಲಿ, ಯದ್ಯತ್ ಏನನ್ನು ಕರೋಮಿ ಮಾಡುತ್ತೇನೊ ಸಕಲಂ-ಅವೆಲ್ಲವನ್ನೂ, ಪರಸ್ಮೈ-ಪಾರಾತ್ಪರನಾದ (ಸರ್ವೋತ್ಕೃಷ್ಟನಾದ) ನಾರಾಯಣಾಯ ನಾರಾಯಣನಿಗೆ ಇತಿ-

ಹೀಗೆಂದು, ಸಮರ್ಪಯಾಮಿ ಸಮರ್ಪಿಸುತ್ತೇನೆ. ಹೀಗೆ ಒಟ್ಟಿನಲ್ಲಿ ನಾವು ಯಾವ ಯಾವ ಭಾವದಿಂದಲಾಗಲಿ, ಏನೇನು ಉದ್ದೇಶದಿಂದಲಾಗಲಿ, ಕಂಡೋ, ಕಾಣದೆಯೋ; ತಿಳಿದೋ, ತಿಳಿಯದೆಯೋ, ಬೇಕೆಂದೋ, ಬೇಡವಾಗಿಯೋ ಯಾವ ಕರ್ಮಾಚರಣೆ ಮಾಡಿದರೂ ಅವೆಲ್ಲ ಭಗವಂತನಿಗೆ ಅರ್ಪಿತವಾಗಲೆಂಬ ದೃಢಭಾವದಿಂದ ಅರ್ಪಿಸಬೇಕು.

**ನಮಃ ಪುಂಡರೀಕವರದ ಪಾಂಡುರಂಗ ಹರಿವಿಠಲ್ ।**
**ಸೀತಾಕಾಂತಸ್ಮರಣೇ–ಜಯ ಜಯರಾಮ್**
**ಗೋವಿಂದನಾಮಸಂಕೀರ್ತನಂ–ಗೋವಿಂದ ಗೋವಿಂದ**
**ಶಂಖಚಕ್ರ ಪೀತಾಂಬರಧಾರಿ, ಹರಿ, ಜಯ । ಭಾರತೀಶಪ್ರಭೋ**
**ಶ್ರೀಹರಯೇ ನಮಃ । ಶ್ರೀಮದ್ರಮಾರಮಣ ಗೋವಿಂದ ಗೋವಿಂದ ।**

ವಿ. ವಿ :- ಭಜನೆಯು ಪೂರ್ಣಗೊಂಡ ಕಾಲದಲ್ಲಿ ಸಮಷ್ಟಿಯಲ್ಲಿ ಕರ್ತೃವು ಭಗವನ್ನಾಮೋಚ್ಚಾರ ಮಾಡುತ್ತಲೆ ಗೋಷ್ಠಿಯಲ್ಲಿರುವವರೆಲ್ಲ ಆ ನಾಮಗಳನ್ನು ಪ್ರತಿಧ್ವನಿಸುವರು. ಇದು ಭಜನಾಪದ್ಧತಿಯ ಸಂಪ್ರದಾಯ.

## ೫೮ ಶ್ರೀ ವಾದಿರಾಜ ಪ್ರೋಕ್ತ ಮಧ್ವಮತದ ಮಹಾತ್ಮ್ಯೆ

**ಮಧ್ವಾಗಮ ಸಿದ್ಧಾಗಮ । ಮಧ್ವಮತವೇ ಸಕಲಮತಕೆ ಮೇಲೆನಿಸಿದ ಮತ ।**
**ಈ ಮಧ್ವಮತವಂ ಪಿಡಿದು ನಡೆದರೆ । ಅಪದ್ಧಮತಮಂ ತೆಗೆದು**
**ಮುಕ್ತಿಗೈವುದು ಸುಕೃತಂ ॥**
**ಒಂದು ಕ್ಷಣದಲಿ ವಾದಿರಾಜರ ದ್ವಂದ್ವಪದವನು ಭಜಿಸಿದವರಿಗೆ ।**
**ಬೆಂದು ಹೋಹುದು ಪೂರ್ವಜನ್ಮದ ದುರಿತಕಾನನವು ।**
**ಈ ಮಂದಮತಿಗಳು ಅರಿವರೆ ॥**
**ಗೋವಿಂದಭಕ್ತರ ಮಹಿಮೆಯನು–ಪುರಂದರಾದಿಗಳರಿವರಲ್ಲದೆ**
**ಮಿಕ್ಕವರಿಗರಿಯಲಹುದೆ ॥**
**ಪಾರಮೇಷ್ಠಿಪದಾಧಿಕಾರಿ । ಋಜುಪದಸ್ಥ । ಗುರುರಾಯ ಪಟ್ಟಭದ್ರ ।**
**ವ್ಯಾಖ್ಯಾನ ಸಿಂಹಾಸನಾಧೀಶ್ವರ । ಅಜ್ಞಾನತಿಮಿರ ಮಾರ್ತಾಂಡ ।**
**ಸುಜ್ಞಾನತೇಜೋಮಯ ।**

ಸ. ಅ :- ಮಧ್ವಮತಕ್ಕೆ ಸಂಬಂಧಪಟ್ಟ ಶಾಸ್ತ್ರವು ಸಿದ್ಧವಾದ ಶಾಸ್ತ್ರವು. ಸಕಲಮತದಲ್ಲೂ ಮಧ್ವಮತವೇ ಸರ್ವೋತ್ಕೃಷ್ಟವಾದುದು. ಈ ಮಧ್ವಮತವನ್ನು ಅನುಸರಿಸಿದರೆ ಇತರ ಜಳ್ಳು(ಸುಳ್ಳು)ಮತಗಳನ್ನೆಲ್ಲ ಹೊರಕ್ಕೆ ದೂಡಿ ದೊರಕುವ ಪುಣ್ಯವು ಮೋಕ್ಷವೀಯುವುದು. ಒಂದು ನಿಮೇಷ ಮಾತ್ರ ವಾದಿರಾಜರ ಪಾದದ್ವಯಗಳನ್ನು ಭಜಿಸಿದರೆ ಪೂರ್ವಜನ್ಮದಲ್ಲಿ ಸಂಚಿತವಾಗಿದ್ದ ಪಾಪವೆಂಬ

ಕಾಡೇ ಉರಿದು ಹೋಗುವುದು. ಗೋವಿಂದಭಕ್ತರ ಮಹಿಮೆಯನ್ನು ಪುರಂದರಾದಿ ದಾಸವರ್ಯರುಗಳಲ್ಲದೆ ಮೂಢಬುದ್ಧಿಯ ಸಾಮಾನ್ಯರು ಅರಿಯಬಲ್ಲರೆ!

ಬ್ರಹ್ಮನ ಪದವಿಗೆ ಅಧಿಕಾರಿಯೂ, ಋಜುಪದದವರಲ್ಲಿ ಮುಂದಾಳೂ ವಾಯುಪಟ್ಟದಲ್ಲಿ ನೆಲೆಸಿದವರೂ, ಪೀಠದಲ್ಲಿ ಮಂಡಿಸಿ (ಶಾಸ್ತ್ರವನ್ನು) ವಿಶದೀಕರಿಸಲು ಸಮರ್ಥರೂ, ಅಜ್ಞಾನವೆಂಬ ಕತ್ತಲೆಗೆ ಸೂರ್ಯನಂತಿರುವವರೂ, ಒಳ್ಳೆಯ ಜ್ಞಾನಕಾಂತಿಯಿಂದ, ಪ್ರಕಾಶಿತರೂ, ಆದವರು ಶ್ರೀ ವಾದಿರಾಜರು.

**ಜಗದ್ಭರಿತ ಪಾಂಚಜನ್ಯಪ್ರಿಯ । ಪಾಂಚಜನ್ಯಸೇವಾಮವಧಾರಯ ॥**

ಸ. ಅ :- ಜಗತ್ತನ್ನು ಧರಿಸಿರುವವನೂ ಪಾಂಚಜನ್ಯವೆಂಬ ಶಂಖದ ಅಭಿಮಾನಿ ಶ್ರೀ ಲಕ್ಷ್ಮೀದೇವಿಯ ಪ್ರಿಯನೂ ಆದ ನಾರಾಯಣನೆ
ಪಾಂಚಜನ್ಯ ಸೇವೆಯನ್ನು ಅವಧರಿಸು.

ವಿ. ವಿ :- ಪಾರಮೇಷ್ಠಿ ಅತ್ಯಂತ ಉನ್ನತ ಸ್ಥಾನಾಪನ್ನನು.
ಅಜ್ಞಾನ ತಿಮಿರ ಭಾಸ್ಕರ = ಜ್ಞಾನವಿಲ್ಲದಿರುವಿಕೆ ಎಂಬ ಕತ್ತಲೆಗೆ ಸೂರ್ಯನಂತೆ ಎಂದರೆ ಅಜ್ಞಾನವನ್ನು ಹೋಗಿಸಿ ಸುಜ್ಞಾನ ಕೊಡುವವ.
ಜಗತ್ + ಭರಿತ = ಜಗತ್ತಿನಲ್ಲೆಲ್ಲ ತುಂಬಿದ.
ಪಾಂಚಜನ್ಯವೆಂಬುದು ವಿಷ್ಣುವಿನ ಶಂಖದ ಹೆಸರು. ಪಂಚಜನನೆಂಬುವನು ಒಬ್ಬ ದೈತ್ಯ. ಇವನು ಪ್ರಹ್ಲಾದನ ತಮ್ಮ ಸಂಹ್ಲಾದನ ಮಗ. ಇವನು ಶ್ರೀಕೃಷ್ಣನ ವಿದ್ಯಾಗುರುವಾದ ಸಾಂದೀಪಿನಿ ಎಂಬುವವನ ಪುತ್ರನನ್ನು ಅಪಹರಿಸಿಕೊಂಡು ಸಮುದ್ರದಲ್ಲಿ ಅಡಗಿದನು. ಸಾಂದೀಪಿನಿಯು ಗುರುದಕ್ಷಿಣೆಗಾಗಿ ಮೃತನಾದ ತನ್ನ ಪುತ್ರನನ್ನೇ ತಂದುಕೊಡೆಂದು ಶ್ರೀಕೃಷ್ಣನನ್ನು ಕೇಳಲು ಬಲರಾಮ-ಕೃಷ್ಣರು ಸಮುದ್ರವನ್ನು ಹೊಕ್ಕು ಅಸುರನನ್ನು ಸಂಹರಿಸಿಗುರುಪುತ್ರನನ್ನು ಕಾಣದೆ ಅಸುರನ ದೇಹದಲ್ಲಿದ್ದ ಪಾಂಚಜನ್ಯವೆಂಬ ಶಂಖವನ್ನು ತೆಗೆದುಕೊಂಡು ಅಲ್ಲಿಂದ ಯಮಲೋಕಕ್ಕೆ ಹೋಗಿ ಗುರುಪುತ್ರನನ್ನು ಕರೆ ತಂದು ಗುರುವಿಗೆ ಒಪ್ಪಿಸಿದರು.

**ಅನೇನ ಮಯಾ ಕೃತೇನ ಯಥಾಶಕ್ತಿ ಹರಿನಾಮಸ್ತುತಿ ಹರಿಸಂಕೀರ್ತನ ಕರಣೇನ ಭಗವಾನ್ ಮಾಸನಿಯಾಮಕ ತ್ಮಕ ಮಧ್ವಪತಿಃ ಶ್ರೀ ಗೋಪಾಲಕೃಷ್ಣಃ ಪ್ರೀಯತಾಮ್ ॥ ಕೃಷ್ಣಾರ್ಪಣಮಸ್ತು ॥**

ಕರ್ಮಾಂತ್ಯದಲ್ಲಿ ತಾನು ಮಾಡಿದ ಸಕಲ ಕರ್ಮಫಲವೂ ಶ್ರೀ ಕೃಷ್ಣನಿಗೆ ಅರ್ಪಿತವಾಗಲೆಂದು ಹೇಳಿಕೊಳ್ಳುತ್ತ ವಿರಮಿಸುವುದು ಶಿಷ್ಟಸಂಪ್ರದಾಯ.

॥ ಶ್ರೀ ಗುರ್ವಂತರ್ಗತ ಮಧ್ವೇಶಾರ್ಪಣಮಸ್ತು ॥





ಶ್ರೀ ಗೋಪಾಲಕೃಷ್ಣಾಯ ನಮಃ ॥

# ತುಲಸೀ ಸಂಕೀರ್ತನೆಯ ಪದಗಳು

**ಯಾ ದೃಷ್ಟ್ವಾ ನಿಖಿಲಾಘಸಂಘಶಮನೀ–ಸ್ಪೃಷ್ಟ್ವಾ ವಪುಃಪಾವನೀ ।**
**ರೋಗಾಣಾಮಭಿವಂದಿತಾ ನಿರಸನೀ–ಸಿಕ್ತಾಂತಕತ್ರಾಸಿನೀ ।**
**ಪ್ರತ್ಯಾಸತ್ತಿ ವಿಧಾಯಿನೀ ಭಗವತಃ–ಕೃಷ್ಣಸ್ಯ ಸಂರೋಪಿತಾ ।**
**ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ–ತಸ್ಯೈ ತುಲಸ್ಯೈ ನಮಃ ॥**

ಸ. ಅ :- ಯಾರ ದರ್ಶನದಿಂದ ಸಮಸ್ತ ಪಾಪಪರಿಹಾರವೂ; ಯಾರ ಸ್ಪರ್ಶನದಿಂದ ದೇಹಶುದ್ಧಿಯೂ, ಯಾರನ್ನು ನಮಸ್ಕರಿಸುವುದರಿಂದ ರೋಗನಾಶವೂ; ಯಾರಿಗೆ ನೀರೆರೆಯುವುದರಿಂದ ಯಮನ ಬಾಧಾನಿವೃತ್ತಿಯೂ; ಯಾರನ್ನು ಬೆಳೆಸುವುದರಿಂದ ಭಗವಂತನಾದ ಕೃಷ್ಣನಲ್ಲಿ ಭಕ್ತಿವೃದ್ಧಿಯೂ, ಯಾರನ್ನು ಆತನ ಚರಣದಲ್ಲಿ ಅರ್ಪಿಸುವುದರಿಂದ ಮೋಕ್ಷಪ್ರಾಪ್ತಿಗೆ ಸಾಧನೆಯೂ ಆಗುವುದೋ (ಅಂತಹ ಮಹಾತ್ಮೆಯುಳ್ಳ) ತುಲಸೀದೇವಿಗೆ ನಮಸ್ಕಾರವು.

ವಿ. ವಿ :- ಅಘ ಸಂಘ = ಪಾಪಸಮೂಹ; ವಪುಃ = ಶರೀರ; ವಿಮುಕ್ತಿ = ಮೋಕ್ಷ

ಮುಂದಿನ ಮನ್ವಂತರಕ್ಕೆ ಅಧಿಪನಾಗುವ ಇಂದ್ರಸಾವರ್ಣಿಯ ಕುಲೋತ್ಪನ್ನನಾದ ಧರ್ಮಧ್ವಜನೆಂಬ ರಾಜನ ಮಗಳು ಶ್ರೀ ಹರಿಯೆ ತನಗೆ ಪತಿಯಾಗಬೇಕೆಂದು ತಪಸ್ಸು-ಮಾಡಿದಳು. ಶ್ರೀ ಲಕ್ಷ್ಮೀದೇವಿಯ ಸೌಂದರ್ಯಕ್ಕೆ ತಕ್ಕಂತೆ (ತುಲ = ಸದೃಶ) ಸುಂದರಿಯಾಗಿದ್ದ, ಲಕ್ಷ್ಮೀದೇವಿಯ ಅಂತಸಂಭೂತಳಾಗಿದ್ದ ಆಕೆಯನ್ನು ರಾಜನು 'ತುಲಸೀ' ಎಂದೇ ಕರೆದನು. ಹರಿಯು ಪ್ರತ್ಯಕ್ಷನಾಗಿ ಆಕೆಯ ಅಭೀಷ್ಟಸಿದ್ಧಿಗಾಗಿ ವೃಕ್ಷರೂಪದಲ್ಲಿ ವೃಂದಾವನದಲ್ಲಿದ್ದುಕೊಂಡು ಸದಾ ಪೂಜ್ಯಳಾಗಿರುತ್ತ ಭಕ್ತರುಗಳು ನಿನ್ನ ದಳಗಳನ್ನು ನನಗೆ ಅರ್ಪಿಸುವುದರಿಂದ ನನ್ನ ನಿತ್ಯ ಸಂಗವನ್ನು ಪಡೆ ಎಂದು ವರವನ್ನಿತ್ತನು. ದೇವ ದಾನವರು ಅಮೃತಸಿದ್ಧಿಗಾಗಿ ಕ್ಷೀರಸಮುದ್ರವನ್ನು ಕಡೆದಾಗ ಕೈಯಲ್ಲಿ ಅಮೃತಕಲಶವನ್ನು ಹಿಡಿದು ಹೊರಬಂದ ಧನ್ವಂತರಿ ರೂಪದ ಶ್ರೀಹರಿಯ ಆನಂದಬಾಷ್ಪ ಬಿಂದುವೊಂದು ಆ ಅಮೃತಕಲಶದಲ್ಲಿ ಬೀಳಲು ತುಲಸಿಯು ಉತ್ಪನ್ನಳಾದಳು. ಅಂದಿನಿಂದ ಆಕೆಯು ಕ್ಷೀರೋದಮಥನೋದ್ಭೂತೆಯಾದಳು. ಶ್ರೀಕೃಷ್ಣನ ಅಷ್ಟಮಹಿಷಿಯರಲ್ಲಿ ರುಕ್ಮಿಣಿ, ಸತ್ಯಭಾಮೆಯರಲ್ಲದೆ ಮುಖ್ಯವಲ್ಲಿ ಜಾಂಬ

ವತಿಯೆ ಶ್ರೀಕೃಷ್ಣನಿಗೆ ಹೆಚ್ಚು ಪ್ರಿಯಳಾಗಿದ್ದವಳು. ದಾಮೋದರನಿಗೆ ತುಲಸಿಯಲ್ಲಿರುವ ವಿಶೇಷ ಪ್ರೀತಿಯನ್ನು ಕಂಡೇ 'ತುಲಸೀ ಜಾಂಬವತೀತ್ಯುಕ್ತಾ-ಲಕ್ಷ್ಮ್ಯಂಶಾವೇಶೇನ ಸಂಯುಕ್ತಾತಯಾ ಸಂಪೂಜಯೇದ್ವಿಷ್ಣುಂ-ವಿಷ್ಣುಲೋಕಮವಾಪ್ನುಯಾತ್ [ಪಾದ್ಮೇ-ಉತ್ತರ ಖಂಡೇ] ಎಂಬ ಪುರಾಣವಾಕ್ಯವೂ ಇದೆ.

ಜಲಂಧರನೆಂಬ ದಾನವನು ಪಾರ್ವತೀದೇವಿಯನ್ನು ಆಶಿಸಿ ಈಶ್ವರನೊಂದಿಗೆ ಯುದ್ಧಕ್ಕೆ ನಿಂತನು. ಆ ಅಸುರನ ಪತ್ನಿ ಬೃಂದೆಯ ಪಾತಿವ್ರತ್ಯ ಹರಣ ಮಾಡಿ ಶಿವನಿಗೆ ಯುದ್ಧದಲ್ಲಿ ಜಯವನ್ನುಂಟುಮಾಡುವುದಕ್ಕಾಗಿ ಶ್ರೀಹರಿಯು ಜಲಂಧರನ ರೂಪಿನಲ್ಲಿ ಬೃಂದೆಯ ಸಂಗಮಾಡಿದನು. ಜಲಂಧರನು ಯುದ್ಧದಲ್ಲಿ ಮಡಿದನು. ನಿಜವರಿತ ಬೃಂದೆಯು ಹರಿಸಾನಿಧ್ಯವನ್ನೇ ಕೋರಲು ಬೃಂದಾವನದ ರೂಪಿನಲ್ಲಿ ತುಲಸಿಗೆ ನಿಯತಸ್ಥಾನವಾಗಿದ್ದು ಪೂಜೆ ಪಡೆಯುವಂತೆ ಆಕೆಗೆ ವರವಿತ್ತನು. ಆದುದರಿಂದ ತುಲಸಿಯ ಸ್ಥಾಪನೆಗೆ ಬೃಂದಾವನವನ್ನು ನಿರ್ಮಿಸುವುದೂ ಬೃಂದಾವನಕ್ಕೆ ಪೂಜಿಸಿ ಅನಂತರ ತುಲಸಿಯನ್ನು ಪೂಜಿಸುವುದೂ ಪದ್ಧತಿಯಾಗಿದೆ. [ಸ್ಕಾಂದಪುರಾಣೋಕ್ತ ಕಾರ್ತಿಕ ಮಾಸ ಮಹಾತ್ಮ್ಯೆ.]

## ಸಂಕೀರ್ತನೆ-೧

ಹರಿ ಹರಿಯೆ ಲಕ್ಷ್ಮಿನಾರಾಯಣ-ಜಯ-ಲಕ್ಷ್ಮಿನಾರಾಯಣ ।
ಲಕ್ಷ್ಮಿನಾರಾಯಣ-ಮಹ-ಲಕ್ಷ್ಮಿನಾರಾಯಣ ॥ಪ॥

ಶ್ರೀ ಲಕ್ಷ್ಮೀಶ-ಲಕ್ಷ್ಮಿನಾರಾಯಣ । ಹರಿ । ಶ್ರೀಧರಣೀಶ-
ಲಕ್ಷ್ಮಿನಾರಾಯಣ ॥೧॥

ಶ್ರೀ ವೆಂಕಟೇಶ ಲಕ್ಷ್ಮಿನಾರಾಯಣ । ಹರಿ । ಕಾಯೊ ಸರ್ವೇಶ
ಲಕ್ಷ್ಮಿನಾರಾಯಣ ॥೨॥

ಶ್ರೀ ರಾಮಚಂದ್ರ ಲಕ್ಷ್ಮಿನಾರಾಯಣ । ಹರಿ । ಶುಭಗುಣಸಾಂದ್ರ
ಲಕ್ಷ್ಮಿನಾರಾಯಣ ॥೩॥

ಎನ್ನ ಮನದೊಡೆಯ ಲಕ್ಷ್ಮಿನಾರಾಯಣ । ಹರಿ । ಚೆನ್ನಗೋಪೀನಾಥ
ಲಕ್ಷ್ಮಿನಾರಾಯಣ ॥೪॥

ಆದಿಮೂರುತಿಯೆ ಲಕ್ಷ್ಮಿನಾರಾಯಣ । ಹರಿ । ವೇದಪಾಲಕನೆ
ಲಕ್ಷ್ಮಿನಾರಾಯಣ ॥೫॥

ಅಕಳಂಕಮಹಿಮನೆ ಲಕ್ಷ್ಮಿನಾರಾಯಣ । ಹರಿ । ಮಕರಕುಂಡಲನೆ
ಲಕ್ಷ್ಮಿನಾರಾಯಣ ॥೬॥

ಕಸ್ತೂರಿತಿಲಕನೆ ಲಕ್ಷ್ಮಿನಾರಾಯಣ । ಹರಿ । ಕೌಸ್ತುಭಧರನೆ
ಲಕ್ಷ್ಮಿನಾರಾಯಣ ॥೭॥

ಕ್ಷೀರಸಾಗರನೆ ಲಕ್ಷ್ಮಿನಾರಾಯಣ । ಹರಿ । ವಾರಿಜೋದ್ಭವಪಿತನೆ
ಲಕ್ಷ್ಮಿನಾರಾಯಣ ॥೮॥

ವಸುದೇವಸುತನೆ ಲಕ್ಷ್ಮಿನಾರಾಯಣ । ಹರಿ । ಅಸುರ ಮರ್ದನನೆ
ಲಕ್ಷ್ಮಿನಾರಾಯಣ ॥೯॥

**ನಂಬಿದೆ ನಿನ್ನ ಲಕ್ಷುಮಿನಾರಾಯಣ । ಹರಿ । ಕಂಬುಕಂಧರನೆ**
**ಲಕ್ಷುಮಿನಾರಾಯಣ ॥ ೧೦ ॥**

ಸ. ಅ :- ಹರಿಯೆ, ಲಕ್ಷ್ಮೀನಾರಾಯಣನೆ, ಮಹಾಲಕ್ಷ್ಮೀ ನಾರಾಯಣನೆ ಜಯವಾಗಲಿ ॥ ಶ್ರೀ ಲಕ್ಷ್ಮೀದೇವಿಯ ಒಡೆಯನೆ, ಭೂದೇವಿಯ ಪತಿಯೆ, ಶ್ರೀ ವೆಂಕಟೇಶನೆ, ಸರ್ವೇಶ್ವರನೆ, ಹರಿಯೆ ಸಲಹು. ಶ್ರೀ ರಾಮಚಂದ್ರನೆ, ಶುಭಕರಗಳಾದ ಗುಣಗಳಿಂದ ವ್ಯಾಪ್ತನೆ, ನನ್ನ ಮನೋಭಿಮಾನಿ ದೇವನೆ, ಸುಂದರನೆ, ಗೋಪಿಕೆಯರ ನಾಥನೆ ಎಲ್ಲಕ್ಕೂ ಮೊದಲಿನವನೆ, ವೇದಗಳ ರಕ್ಷಕನೆ, ಕಳಂಕ ವಿಲ್ಲದ ಮಹಿಮೆಯುಳ್ಳವನೆ, ಮಕರಕುಂಡಲವನ್ನು ಧರಿಸಿರುವವನೆ, ಕಸ್ತೂರಿಯ ತಿಲಕತಿದ್ದಿದ ಮುಖವುಳ್ಳವನೆ, ಕೌಸ್ತುಭವೆಂಬ ಮಣಿಯ ಹಾರವನ್ನು ಧರಿಸಿರುವವನೇ, ಕ್ಷೀರಸಾಗರವನ್ನೇ (ವಾಸಸ್ಥಾನವನ್ನಾಗಿ) ಉಳ್ಳವನೆ, ಕಮಲದಲ್ಲಿ ಹುಟ್ಟಿದ ಬ್ರಹ್ಮನ ತಂದೆಯೆ, ವಸುದೇವನ ಮಗನಾದ ವಾಸುದೇವನೆ, ರಾಕ್ಷಸಸಂಹಾರಕನೆ, ಬಲಮುರಿಶಂಖದಂತೆ ಕುತ್ತಿಗೆಯುಳ್ಳವನೆ, ಲಕ್ಷ್ಮೀಸಹಿತನಾದ ನಾರಾಯಣನೆ, ಹರಿಯೆ ನಿನ್ನನ್ನು ನಾನು ನಂಬಿದ್ದೇನೆ.

## ಸಂಕೀರ್ತನೆ-೨

**ರುಗ್ಮಭೂಷಣ ಪಾಲಿಸೆನ್ನನು–ತಿಗ್ಮಕಿರಣಶತಪ್ರಭ ।**
**ರುಕ್ಮಿಣೀಪವನಾರ್ಚ್ಯ ಸತ್ಪದಯುಗ್ಮ ಆಡಿಸಿದ ಕೃಷ್ಣನೆ ॥ ೧ ॥**
**ದ್ವಾರಕಾಪುರದಲ್ಲಿ ದೇವಕಿ–ಸರಸಬಾಲಕಲೀಲೆಯು ।**
**ತೋರು ಎನುತಲಿ ದಧಿಯ ಮಥಿಸಲು–ತರುಣಿ ಬಾಲ್ಯವ ತೋರಿದೆ ॥ ೨ ॥**
**ತೊಡೆಯನೇರಿ ಸ್ತನ್ಯಪಾನವ–ಮಾಡಿ ಮೋಹವ ತಾಯಿಗೆ ।**
**ಕೊಡುತ ಕಡೆಗೋಲು ನೇಣುಸಹಿತಲೆ–ಪ್ರೌಢ ನೀನಪಹರಿಸಿದೆ ॥ ೩ ॥**
**ಮೊಸರುಭಾಂಡವನೊಡೆದು ಬೆಣ್ಣೆಯ–ನಸುನಗುತಲಿ ಭಕ್ಷಿಸಿ ।**
**ಶೇಷಶಯನ ನೀನು ಕುಣಿಯೆ ಸಂ–ತೋಷಪಟ್ಟಳು ದೇವಕಿ ॥ ೪ ॥**
**ದೂರದಿಂದಲೆ ಕಂಡು ರುಕ್ಮಿಣಿ–ಹರುಷದಿಂ ಶಿಶುರೂಪವ ।**
**ತರುಣರೂಪವ ನೀನು ಪುನರಪಿ–ತೋರಲೊ ಸತಿ ನುಡಿದಳು ॥ ೫ ॥**
**ವಿತತವೈಭವ ಈಪರಿಯಲಿ–ಪ್ರತಿಮೆಯನ್ನು ಮಾಡಿಸಿ ।**
**ಸತತ ಪೂಜೆಯ ಮಾಳ್ಪರೆ ಅತಿ–ಪ್ರೀತಿಯಿಂದ ಕೊಡೆನಗೆ ॥ ೬ ॥**
**ರಮಣಿ ಈಪರಿ ಪೇಳೆ ವಿಶ್ವ–ಕರ್ಮನಿಂದ ಮಾಡಿಸಿ ।**
**ಕಮಲನಾಭನು ಇತ್ತ ಅದರಲಿ–ವಿಮಲಪೂಜೆಯ ಕೊಂಡನು ॥ ೭ ॥**
**ವೀರ ನಿನ್ನವತಾರಕಾರ್ಯವು–ಪರಿಸಮಾಪ್ತವು ಆಗಲು ।**
**ಸುರಪನಂದನ ತತ್ಪ್ರತಿಮೆಯನು–ಶರಧಿತೀರದಲಿಟ್ಟನು ॥ ೮ ॥**

**ನಾವೆಯಲ್ಲಿ ಗೋಪಿಚಂದನ-ಸಂವೃತಾರ್ಚಯು ಬರುತಿರೆ ।**
**ನಾವೆಯೊಡೆಯಲು ಮಧ್ವಮುನಿಪನು-ಭಾವದಿಂದಲೆ ತಂದನು ॥ ೯ ॥**
**ಅಸುರರೊಡೆಯ ಶ್ರೀ ಮರುತ್ಪತಿ-ತತ್ಪ್ರತಿಷ್ಠೆಯ ವಿರಚಿಸಿ ।**
**ಕುಮುದಬಂಧುಕ್ಷೇತ್ರದಲ್ಲಿ-ಅಮಿತಪೂಜೆಯ ಮಾಡುತ । ॥ ೧೦ ॥**
**ನನ್ನ ಹಿರಿಯರ ಪುಣ್ಯ ಫಲಿಸಲು-ನಿನ್ನ ಪೂಜೆಯ ಮಾಡುತ ।**
**ಧನ್ಯನಾದೆನು ಮುಕ್ತಿ ಕರಗತ-ವೆನ್ನಗಾಯಿತು ಕೃಷ್ಣನೆ ॥ ೧೧ ॥**
**ಮಧ್ವಪೂಜಿತ ರಕ್ಷಿಸೆನ್ನನು-ಸಾಧ್ವಸೋಜ್ಝಿತ ಸದ್ಗುಣ ।**
**ಸಾಧ್ವಲಂಕೃತವೇಷ ಮುಕ್ತಿ-ಪದಾಬ್ಜನೆ ರಘುತಿಲಕನೆ ॥ ೧೨ ॥**

ಸ. ಅ :- ಅತ್ಯಂತ ಪ್ರಕಾಶವಾದ (ಸ್ವರ್ಣದ) ಆಭರಣಗಳಿಂದಲಂಕೃತನಾದ, ಶತ (ನೂರು) ಸಂಖ್ಯಾಕ ಸೂರ್ಯರ ಕಿರಣಗಳ ಬೆಳಕಿನಂತೆ ಕಾಂತಿಯುಳ್ಳ, ರುಕ್ಮಿಣೀದೇವಿ ಹಾಗೂ ವಾಯುದೇವರು ಇವರುಗಳಿಂದ ಪೂಜಿಸಲ್ಪಟ್ಟ ಪಾದದ್ವಯಗಳುಳ್ಳ, ಉಡುಪಿ ಕ್ಷೇತ್ರದಲ್ಲಿ ನೆಲೆಸಿರುವ ಕೃಷ್ಣಸ್ವಾಮಿಯೆ ನನ್ನನ್ನು ರಕ್ಷಿಸು.

೨ –ದ್ವಾರಕೆಯಲ್ಲಿ ದೇವಕಿದೇವಿಯು (ತನ್ನ ಮಗನಾದ ಕೃಷ್ಣನನ್ನು ಕುರಿತು) ರಸಯುಕ್ತವಾದ ನಿನ್ನ ಬಾಲಲೀಲೆಗಳನ್ನು ತೋರಿಸು ಎನ್ನಲು ಕರುಣಿಯಾದ ನೀನು ಮೊಸರನ್ನು ಕಡೆಯುತ್ತಿರುವ ಆಕೆಗೆ ನಿನ್ನ ಎಳೆತನವನ್ನೂ ತೋರಿಸಿದೆಯಲ್ಲವೆ ?

೩ –ತಾಯಿಯ (ದೇವಕಿಯ) ತೊಡೆಯನ್ನು ಏರಿ (ತೊಡೆಯ ಮೇಲೆ ಕುಳಿತು) ಮೊಲೆಯನ್ನು ಕುಡಿವ ತಾಯಿಗೆ ಸಂತೋಷವನ್ನುಂಟುಮಾಡುತ್ತ, ಕ್ರಮಶಃ ಪ್ರೌಢನಾದ ನೀನು ಹಗ್ಗ ಸಹಿತವಾದ ಕಡೆಗೋಲನ್ನೇ ಅಪಹರಿಸಿದೆಯಲ್ಲವೆ ?

೪ –ಮೊಸರಿನ ಗಡಿಗೆಯನ್ನು ಒಡೆದು (ಛಿದ್ರಮಾಡಿ), ಹುಸಿನಗುತ್ತ ಬೆಣ್ಣೆಯನ್ನು ತಿಂದು, ಶೇಷಶಾಯಿಯೆ ನೀನು ನರ್ತಿಸಲು ನಿನ್ನ ತಾಯಿಯಾದ ದೇವಕಿಯು ಸಂತೋಷಗೊಂಡಳಲ್ಲವೆ ?

೫ –ನಿನ್ನ ಶಿಶುರೂಪವನ್ನು ದೂರದಿಂದಲೇ ನೋಡಿದ ನಿನ್ನ ಪತ್ನಿಯಾದ ರುಕ್ಮಿಣಿಯು ನಿನ್ನ ತಾರುಣ್ಯದ ರೂಪವನ್ನು ಮತ್ತೆ ತೋರಿಸೆಂದು ನಿನ್ನನ್ನು ಕೇಳಿದಳಲ್ಲವೆ ?

೬ –ಈ ರೀತಿಯಲ್ಲಿ ಪ್ರಕಟವಾದ (ಹರಡಿದ) ನಿನ್ನ ವೈಭವಪೂರ್ಣವಾದ ಪ್ರತಿಕೃತಿಯನ್ನು (ವಿಗ್ರಹವನ್ನು) ಮಾಡಿಸಿ ಸದಾ ಪ್ರೀತಿಯಿಂದ ಅರ್ಚಿಸಲು ಅದನ್ನು ತನಗೆ ಕೊಡು.

೭ –(ಎಂದು) ನಿನ್ನ ಪತ್ನಿಯಾದ ರುಕ್ಮಿಣಿಯು ಕೇಳಲು ದೇವಶಿಲ್ಪಿಯಾದ ವಿಶ್ವಕರ್ಮನಿಂದ ನಿನ್ನ ವಿಗ್ರಹವನ್ನು ಮಾಡಿಸಿ, ಕಮಲನಾಭನಾದ ನೀನು

ಆ ಮೂರ್ತಿಯನ್ನು ಕೊಟ್ಟು ಅದರ ಮುಖಾಂತರ ಪರಿಶುದ್ಧವಾದ ಆಕೆಯ ಅರ್ಚನೆಯನ್ನು ಸ್ವೀಕರಿಸಿದೆಯಲ್ಲವೆ ?

೮ –ಶೂರನಾದ ಎಲೈಕೃಷ್ಣನೆ, ನೀನು ಅವತರಿಸಿದ್ದ ಕಾರ್ಯವು ಮುಗಿಯಲು ದೇವೇಂದ್ರನ ಮಗನಾದ ಅರ್ಜುನನು ಆ ಪ್ರತಿಮೆಯನ್ನು ಸಮುದ್ರದ ಕರೆಯಲ್ಲಿ ಇಟ್ಟನು.

೯ –ಕ್ರಮಶಃ ಗೋಪಿಚಂದನದಿಂದ ಆಚ್ಛಾದಿತವಾದ ಆ ವಿಗ್ರಹವು ದ್ವಾರಕೆಯಲ್ಲಿ ಬೆಸ್ತರ ಮುಖಾಂತರ ನಾವೆಯನ್ನು ಸೇರಿ ಉಡುಪಿಯ ಸಮೀಪದಲ್ಲಿ ಸಮುದ್ರದ ನಡುವೆ ಆ ನಾವೆಯು ವಿಘಾತಕ್ಕೆ ಒಳಗಾಗುವಂತೆ ಆಗಲು ಮಧ್ವಮುನಿಗಳು ತಮ್ಮ ಅಂತರಂಗಪೂರ್ವಕ ಅದನ್ನು ದಡಕ್ಕೆ ಸೇರಿಸಿದರು.

೧೦ –ದೇವತೆಗಳಿಗೆ ಒಡೆಯನಾದ ವಾಯುದೇವನು ಕುಮುದಬಂಧುಕ್ಷೇತ್ರದಲ್ಲಿ (ಉಡುಪಿಯಲ್ಲಿ) ಆ ವಿಗ್ರಹವನ್ನು ಪ್ರತಿಷ್ಠಿಸಿ ಅಪರಿಮಿತವಾಗಿ ಪೂಜಿಸುತ್ತಿದ್ದನು.

೧೧ –ನನ್ನ ಪೂರ್ವಜರ ಪುಣ್ಯದಿಂದ ಮೋಕ್ಷವು ಕೈಗೆಟಕುವಂತಾಯಿತು, ಹೇ ಕೃಷ್ಣದೇವ ನಿನ್ನನ್ನು ಪೂಜಿಸುತ್ತ ಧನ್ಯನಾದೆನು, ಎಂದುಕೊಳ್ಳುತ್ತ ಮಧ್ವಮುನಿಗಳಿಂದ ಪೂಜಿಸಲ್ಪಟ್ಟ ಭಯರಹಿತನಾದ ಒಳ್ಳೆಯ ಗುಣವುಳ್ಳ ಉತ್ತಮವಾದ ಅಲಂಕಾರಪೂರ್ಣನಾದ ರಘುವಂಶಕ್ಕೆ ತಿಲಕಪ್ರಾಯನಾದ ರಾಮನೆ ನನ್ನನ್ನು ರಕ್ಷಿಸು ಎಂದು ಕೃತಿಕರ್ತನು ಪ್ರಾರ್ಥಿಸಿದ್ದಾನೆ.

ವಿ. ವಿ:- ಉಡುಪಿಯಲ್ಲಿ ಕುಮುದಗಳಿಗೆ ಮಿತ್ರನಾದ ಚಂದ್ರನ ಹೆಸರಿನ ಪುಷ್ಕರಣಿಯೂ (ಚಂದ್ರಪುಷ್ಕರಣಿ), ಚಂದ್ರನನ್ನು ತನ್ನ ಶಿರದಲ್ಲಿ ಅಲಂಕರಿಸಿಕೊಂಡಿರುವ ಚಂದ್ರಮೌಳೀಶ್ವರನ ಸನ್ನಿಧಿಯೂ ಇರುವುದರಿಂದ ಅದನ್ನು ಕುಮುದಬಂಧುಕ್ಷೇತ್ರವೆಂದಿರಬಹುದು ಉಡುಪಿಯಲ್ಲಿರುವ ಕೃಷ್ಣವಿಗ್ರಹವು ಶ್ರೀ ರುಕ್ಮಿಣಿದೇವಿಯ ಹಸ್ತಗಳಿಂದ ಪೂಜಿತವಾದುದೆಂಬ ಅಭಿಪ್ರಾಯವಾಗುವುದು.

ರುಗ್ಮ ಪ್ರಕಾಶವಾದ (ಅತ್ಯಂತ ಹೊಳಪಿನ), ತಿಗ್ಮ - ಸೂರ್ಯ. ಕುಮುದ-ನೈದಿಲೆ. ಅದಕ್ಕೆ ಬಂಧು-ಚಂದ್ರ.

ದ್ವಾರಕೆಯಲ್ಲಿ ದೇವಕಿದೇವಿಯು ಕೃಷ್ಣನನ್ನು ತನ್ನ ಬಾಲಲೀಲೆಗಳನ್ನು ತೋರಿಸೆಂದು ಕೇಳಿಕೊಂಡಳು. ಭಕ್ತ ಪರಾಧೀನನಾದ ದೇವನು ಪುಟ್ಟ ಬಾಲಕನಾಗಿ ತನ್ನ ತಾಯಿಯು ಮೊಸರನ್ನು ಕಡೆಯುತ್ತಿರುವಾಗ ತನ್ನ ಲೀಲೆಯನ್ನು ತೋರುತ್ತ ಆಕೆಯ ತೊಡೆಯ ಮೇಲೆ ಮಲಗಿ ಸ್ತನ್ಯಪಾನ ಮಾಡಿ, ಆಕೆಯು ಹಿಡಿದಿದ್ದ ಕಡೆಗೋಲನ್ನು ಹಗ್ಗದೊಂದಿಗೆ ಮುರಿ ಮಾಡಿ. ತಾನು ಬೆಳೆದು, ಮೊಸರಿನ ಗಡಿಗೆಯನ್ನೊಡೆದು ನಗುತ್ತ ಬೆಣ್ಣೆಯನ್ನು ತಿಂದು ನಾಟ್ಯವಾಡುತ್ತ ತಾಯಿಗೆ ಸಂತೋಷವನ್ನುಂಟುಮಾಡಿದನು. ಈ ಬಾಲಲೀಲೆಯನ್ನು ಕಂಡು ರುಕ್ಮಿಣಿಯು ಆತನ ತಾರುಣ್ಯವನ್ನೇ ಕಾಣಲು ಆಶಿಸಿ ಆತನ ಬಾಲ್ಯರೂಪದ ಪ್ರತೀಕವನ್ನು ಮಾಡಿಸಿಕೊಂಡು ಮನಸಾ ಪೂಜಿಸುತ್ತಿದ್ದಳು. ಕೃಷ್ಣಾವತಾರದ ಅಂತ್ಯದ ವೇಳೆಗೆ ಅರ್ಜುನನು

ಆ ವಿಗ್ರಹವನ್ನು ದ್ವಾರಕೆಯ ಸಮುದ್ರದ ಕರೆಯಲ್ಲಿ ಬಿಟ್ಟುಬಂದನು. ಕ್ರಮಶಃ ಆ ವಿಗ್ರಹವು ಗೋಪಿಚಂದನದಿಂದ ಆವೃತವಾಗಿ ಬೆಸ್ತರ ಮೂಲಕ ನಾವೆಯನ್ನು ಸೇರಿ ಉಡುಪಿಯ ಬಳಿ ಅಪಾಯಕರವಾದ ಸ್ಥಿತಿಯಲ್ಲಿ ಗಾಳಿಗೆ ಸಿಕ್ಕಿದಾಗ ಮಧ್ವಾಚಾರ್ಯರು ಆ ನಾವೆಯನ್ನು ದಡಕ್ಕೆ ಸ್ವೇಚ್ಛೆಯಿಂದ ಬರಮಾಡಿಕೊಂಡು ಗೋಪಿಚಂದನದಲ್ಲಿ ಹುದುಗಿದ್ದ ಆ ವಿಗ್ರಹವನ್ನು ಪ್ರತಿಷ್ಠಿಸಿದರಂತೆ. ಈ ಕಥಾ ಸನ್ನಿವೇಶವು ಈ ಮೇಲಿನ ಸಂಕೀರ್ತನೆಯಲ್ಲಿ ಸೂಚಿತವಾಗಿದೆ.

## ಸಂಕೀರ್ತನೆ-೩

ನೀರೆ ತೋರೆಲೆ ನೀರೆ ತೋರೆಲೆ ನೀಲವರ್ಣದ ದೇವನ ।
ಭಾಮೆ ತೋರೆಲೆ ಭಾಮೆ ತೋರೆಲೆ ಬಾಲಉಡುಪಿನ ಕೃಷ್ಣನ ॥ ೧ ॥
ಕಾಲಲಂದುಗೆ ಕಡಗ ಕಂಕಣ ಲೋಲ ಉಡುಪಿಗೆ ಬಂದನ ।
ಬಾಲಲೀಲೆಯ ಜಗಕೆ ತೋರಿದ ಗೋಪಾಲ ಉಡುಪಿನ ಕೃಷ್ಣನ ॥ ೨ ॥
ಕಡೆವ ಕಡೆಗೋಲ ನೇಣುಸಹಿತಲಿ ಹಡಗಿನೊಳಗಿಂದ ಬಂದನ ।
ಬಿಡದೆ ಭಕ್ತರ ಒಡನೆ ಪಾಲಿಪ ರಂಗ ಉಡುಪಿನ ಕೃಷ್ಣನ ॥ ೩ ॥
ಮುದ್ದುಮುಖದವ ಮೂರುಜಡೆಯಲಿ ಇದ್ದ ಉಡುಪಿನ ಸ್ಥಳದಲಿ ।
ಒದ್ದು ಶಕಟನ ಆದಿಗುರುಗಳ ಮುದ್ದು ಉಡುಪಿನ ಕೃಷ್ಣನ ॥ ೪ ॥
ಮಲ್ಲರೊಡಗೂಡಿ ಮಧುರಪುರದಲಿ ಬಿಲ್ಲಹಬ್ಬವ ನಡೆಸಿದ ।
ಬಲ್ಲಿದ ಕಂಸಾಸುರನ ಸೀಳಿದ ಮಲ್ಲಉಡುಪಿನ ಕೃಷ್ಣನ ॥ ೫ ॥
ಬಾಲಸನ್ಯಾಸಿಗಳು ನಿನ್ನನು ಪ್ರೇಮದಿಂದಲಿ ಭಜಿಸಲು ।
ಆಲದೆಲೆಯ ಮೇಲೆ ಮಲಗಿದ ಗೋಪಾಲ ಉಡುಪಿನ ಕೃಷ್ಣನ ॥ ೬ ॥
ಅದ್ವಯಹರಿ ಬ್ರಹ್ಮವಲ್ಲಭ ವಿದ್ಯಸಾರಥಿ ಮಾಡಿದ (ದೆ) ।
ಸದ್ಗುರು ಮುನಿ ವಾದಿರಾಜನ ಮುದ್ದು ಉಡುಪಿನ ಕೃಷ್ಣನ ॥ ೭ ॥

ಸ. ಅ :- ನೀಲವರ್ಣನೂ (ಮೇಘಶ್ಯಾಮನೂ), ಬಾಲರೂಪಿಯೂ ಆದ ಉಡುಪಿ ಕ್ಷೇತ್ರದಲ್ಲಿ ನೆಲೆಸಿರುವ ಶ್ರೀ ಕೃಷ್ಣಸ್ವಾಮಿಯನ್ನು ಎಲೌ ನೀರೆ ತೋರಿಸು॥

೨ ಕಾಲಿನಲ್ಲಿ ಹಾಕಿಕೊಂಡಿರುವ ಬಳೆ (ರುಳಿ), ಕೈಯಿನಲ್ಲಿ ಕಡಗ (ಬಳೆ), ಕಂಕಣ (ವ್ರತಾಚರಣೆಗಾಗಿ ಕಟ್ಟಿಕೊಳ್ಳುವ ಅರಿಸಿನದ ದಾರ) ಇವುಗಳಿಂದ ಮನೋಹರನಾಗಿ ಉಡುಪಿ ಕ್ಷೇತ್ರಕ್ಕೆ ಆಗಮಿಸಿ; ತನ್ನ ಬಾಲಲೀಲೆಯನ್ನು ಲೋಕಕ್ಕೆಲ್ಲ ತೋರಿದ ಗೋಪಾಲನಾದ ಉಡುಪಿಯ ಕೃಷ್ಣ ಮೂರ್ತಿಯನ್ನು ತೋರಿಸು.

೩ –ಹಗ್ಗ ಸಹಿತವಾಗಿ ಕಡೆಗೋಲನ್ನು (ಮಂತನ್ನು) ಕೈಯಲ್ಲಿ ಹಿಡಿದುಕೊಂಡೇ ಹಡಗಿನಿಂದ ಬಂದು ಸ್ವಲ್ಪವೂ ಪಾಲುಮಾರದೆ ತನ್ನ ಭಕ್ತರನ್ನು ಕಾಪಾಡುವ ಉಡುಪಿಯಲ್ಲಿನ ಕೃಷ್ಣನನ್ನು ತೋರಿಸು.

೪ –ಮೂರುಜಡೆಯಿಂದ ಕೂಡಿದ ಸುಂದರವಾದ ಮುಖದ ಉಡುಪಿಯಲ್ಲಿ ನೆಲೆಸಿರುವ ಆ ದೇವನು ಆದಿಗುರುಗಳಾದ ಮಧ್ವಾಚಾರ್ಯರ ಮುದ್ದಿನ ಮೂರುತಿಯು. ಶಕಟಾಸುರನನ್ನು ಕಾಲಿನಿಂದ ಒದ್ದೇ ಸಂಹಾರ ಮಾಡಿದ ಮಹಿಮನು.

೫ –ಜಟ್ಟಿಗಳೊಂದಿಗೆ ಸೇರಿಕೊಂಡು ಮಧುರಾಪುರದಲ್ಲಿ ಬಿಲ್ಲಿನ ಹಬ್ಬವನ್ನು ಆಚರಿಸಿ ಪ್ರಬಲನಾಗಿದ್ದ (ಸೋದರಮಾವ) ಕಂಸನನ್ನು ಸೀಳಿದ, ಜಟ್ಟಿಗಳ ಉಡುಪನ್ನು ಧರಿಸಿದ ಕೃಷ್ಣನನ್ನು ತೋರಿಸು.

೬ –ಉಡುಪಿ ಕ್ಷೇತ್ರದಲ್ಲಿ ಅಷ್ಟಮಠಗಳ ಬಾಲಸನ್ಯಾಸಿಗಳೆಲ್ಲ ಆತನನ್ನು ಅತ್ಯಂತ ಪ್ರೇಮದಿಂದ ಸೇವಿಸುತ್ತಿರಲು (ಪ್ರಳಯ ಜಲದಲ್ಲಿ) ಆಲದೆಲೆಯ ಮೇಲೆ ಮಲಗಿದ ಉಡುಪಿಯ ಗೋಪಾಲಕೃಷ್ಣ ಮೂರ್ತಿಯನ್ನು ತೋರಿಸು.

೭ –ಆತನಿಗೆ ಸಾಟಿಯಾದವನು ಮತ್ತೊಬ್ಬನಿಲ್ಲದ ಹರಿನಾಮಕನೂ, ಬ್ರಹ್ಮನ ಪ್ರಭುವೂ (ತಂದೆಯೂ), ಈ ದೇಹವೆಂಬ ರಥಕ್ಕೆ (ವಿದ್ಯೆಎಂದರೆ ಜ್ಞಾನ) ಆ ಜ್ಞಾನವನ್ನೇ ಸಾರಥಿಯನ್ನಾಗಿ ಮಾಡಿದವನೂ ಆದ ಸದ್ಗುರುಗಳಾದ ವಾದಿರಾಜರ ಮುದ್ದಿನ ಉಡುಪಿಕೃಷ್ಣನನ್ನು ತೋರಿಸು .

ವಿ. ವಿ :- ಉಡುಪಿಕ್ಷೇತ್ರಕ್ಕೆ ರೌಪ್ಯಪೀಠ ಅಥವ ರಜತಪೀಠಪುರವೆಂಬ ಹೆಸರು ಉಂಟು. ಯುಗಾಂತರದಲ್ಲಿ ರಾಮಭೋಜನೆಂಬ ರಾಜನು ಅಶ್ವಮೇಧಯಾಗಕ್ಕಾಗಿ ನೇಗಿಲಿನಿಂದ ಭೂಶುದ್ಧಿಮಾಡುತ್ತಿದ್ದಾಗ ಘಟಸರ್ಪವೊಂದು ಅದಕ್ಕೆ ಸಿಕ್ಕಿ ಮೃತಪಟ್ಟಿತು. ಸರ್ಪ ಹತ್ಯಾ ದೋಷಕ್ಕಾಗಿ ದುಃಖಿಸುತ್ತಿದ್ದ ರಾಜನಿಗೆ ಪರಶುರಾಮದೇವನು ಕಾಣಿಸಿಕೊಂಡು ಸರ್ಪವು ಒಬ್ಬ ರಾಕ್ಷಸನು, ಹತ್ಯಾದೋಷ ನಿನಗಿಲ್ಲ, ಆದರೂ ನಿನ್ನ ಮನಶ್ಶಾಂತಿಗಾಗಿ ಬೆಳ್ಳಿಯ ಪೀಠವನ್ನು ಮಾಡಿಸಿ ಆದರ ನಾಲ್ಕು ಮೂಲೆಗಳಲ್ಲೂ ಸರ್ಪಗಳನ್ನು (ಬೆಳ್ಳಿಯ) ಪ್ರತಿಷ್ಠಿಸಿ ಪೂಜಿಸು. ಯುಗಾಂತ್ಯದಲ್ಲಿ ನಾನೆ ಆ ಪೀಠದಲ್ಲಿ ಆವಿರ್ಭವಿಸುತ್ತೇನೆ. ಆ ಕ್ಷೇತ್ರವು ರೌಪ್ಯಪೀಠಪುರವೆಂದು ಹೆಸರ್ಗೊಳ್ಳಲಿ ಎಂದು ಉಸುರಿ ಅಂತರ್ಧಾನನಾದನು. ಆ ಪೀಠವೆ ಪ್ರಕೃತ ಉಡುಪಿಯಲ್ಲಿ ರೌಪ್ಯಪೀಠವಾಗಿದೆ.

## ಸಂಕೀರ್ತನೆ-೪

ಪ|| ಗೋವಿಂದ ಗೋವಿಂದ ರಾಮ । ಗೋವಿಂದ ನಾರಾಯಣ ।
ಗೋವಿಂದ ಗೋಪಾಲಕೃಷ್ಣ । ಗೋವಿಂದ ನಾರಾಯಣ ||

ಚ|| ಸೋಮಾಸುರನೆಂಬ ಅಸುರನು-ಸಾಮಕವೇದವನೊಯ್ದನು ಮ ।
ಸೋಮಾಸುರನನ್ನು ಕೊಂದು-ಸಾಮಕವೇದವ ತಂದನು ಮ || ೧ ||
ಗುಡ್ಡವು ಮುಳುಗಿಪೋಗಲು ಸಮ್ಮದೇವ-ಗುಡ್ಡ ಬೆನ್ನಲಿ ಪೊತ್ತನು ಮ ।
ಗುಡ್ಡದಂತಹ ಅಸುರರನ್ನೆಲ್ಲ-ಅಡ್ಡಗೆಡಹಿ ಬಿಸುಟನು ಮ || ೨ ||
ಚಿನ್ನಗಣ್ಣಿನವನು ಬಂದು-ಕನ್ನೆಕಣ್ಣನೊಯ್ದನು ಮ । ಎರ
ಡ್ಹೊನ್ನು ರೂಪವತಾಳಿದಸುರನ-ಭಿನ್ನಭಿನ್ನವ ಬಗಿದನು ಮ || ೩ ||

ಕಂಭದಿಂದಲಿ ಬಂದು ನಮ್ಮ ದೇವ-ಇಂಬಾದಸುರನ ಬಗಿದನು ಮ ।
ನಂಬಿದ ಪ್ರಹ್ಲಾದನ್ನ ಸಲಹಿದ-ಅಂಬುಜನಾಭ ನೃಸಿಹ್ಮನು ಮ ॥ ೪ ॥

ಮುರುಡನಾಗಿ ಬಂದು ನಮ್ಮ ದೇವ-ಬಲಿಯ ದಾನವ ಬೇಡಿದನು ಮ ।
ನೆಲವ ಈರಡಿ ಅಳೆದು ಸೆಳೆದು-ಬಲಿಯ ಪಾತಾಳಕ್ಕೊತ್ತಿದನು ಮ ॥ ೫ ॥

ಕೊಡಲಿಯನ್ನು ಹಿಡಿದು ನಮ್ಮ ದೇವ-ಕಡಿದ ಕ್ಷತ್ರಿಯರನ್ನು ಮ ।
ಪಡೆದ ತಾಯಿಶಿರವ ಸೀಳಿ-ಪಡೆದನಾಕೆಯ ಪ್ರಾಣವನು ಮ ॥ ೬ ॥

ಎಂಟೆರಡುತಲೆಯ ಅಸುರನ-ಗಂಟಲ ಭೇದಿಸಿ ಬಿಸುಟನು ಮ ।
ಒಂಟಿರೂಪವ ತಾಳಿ ಲಂಕೆಯ-ಬಂಟವಿಭೀಷಣಗಿತ್ತನು ಮ ॥ ೭ ॥

ಸೋಳಸಾಸಿರಸುದತಿಯರೆಲ್ಲರ-ಕೇಳ-ಪೋಳದೊಳಿಪ್ಪನು ಮ ।
ಬಾಲಕನಾಗಿ ತನ್ನ ಹೃದಯದಿ-ಲೋಲಲಕುಮಿಯರಸನು ಮ ॥ ೮ ॥

ಒಪ್ಪದಿಂದಲಿ ಬಂದು ನಮ್ಮ ದೇವ-ಇಪ್ಪೆವನದೊಳಗಿಪ್ಪನು ಮ ।
ಸರ್ಪಶಯನನಾಗಿ ಪೋಗಿ-ತ್ರಿಪುರಸಂಹಾರ ಮಾಡಿದನು ಮ ॥ ೯ ॥

ಯಮುಮ ಯಮುಮ ಯಮುಮ ನಮ್ಮ ದೇವ-ಬಲಿದ ಕಲ್ಕ್ಯವತಾರನು ಮ ।
ಇಳೆಯ ಸ್ವರ್ಗಪಾತಾಳಕೊಡೆಯ-ಚೆಲುವ ಶ್ರೀ ಹಯವದನನು ಮ ॥ ೧೦ ॥

ಸ. ಅ :- ಗೋವಿಂದ, ರಾಮ, ನಾರಾಯಣ, ಗೋಪಾಲಕೃಷ್ಣಾದಿ ಅನಂತನಾಮನೆ ವಂದನೆ ॥ಪ॥

ಚ: ೧ -ಸೋಮಾಸುರನೆಂಬ ರಕ್ಕಸನು ಸಾಮುಕ (ಸಾಮವೇದ ಬಲ್ಲವ) ವೇದಗಳನ್ನು ಅಪಹರಿಸಿದನು. ಅವನನ್ನು ಕೊಂದು ಸಾಮಾದಿ ವೇದಗಳನ್ನು ಉದ್ಧರಿಸಿದ ಪ್ರಭು ನೀನು ಅಲ್ಲವೆ !

೨ – ಮಂದರಪರ್ವತವು ಸಮುದ್ರದಲ್ಲಿ ಮುಳುಗಲು ಕೂರ್ಮನಾಗಿ ಬೆನ್ನಿನ ಮೇಲೆ ಅದನ್ನೆತ್ತಿ ಹಿಡಿದು ರಾಕ್ಷಸರನ್ನೆಲ್ಲ ಶರಣಾಗತರನ್ನಾಗಿಮಾಡಿಕೊಂಡವನಲ್ಲವೆ!

೩ – ಹಿರಣ್ಯಾಕ್ಷನು ಬಂದು (ಭೂಮಿ ಎಂಬ) ಸ್ತ್ರೀಯನ್ನು ಎತ್ತಿಕೊಂಡು ಹೋದಾಗ ಎರಡು ವೇಳೆ ಹೊನ್ನು ರೂಪವನ್ನು ತಾಳಿದ ಆ ಅಸುರನನ್ನು (ವರಾಹ ರೂಪ ತಾಳಿ) ಛೇದಿಸಿದವನಲ್ಲವೆ !

೪ – ಕಂಭದಲ್ಲಿ ಆವಿರ್ಭವಿಸಿ ನಿನ್ನ ಹಿಡಿತಕ್ಕೆ ಸಿಕ್ಕಿದ ಹಿರಣ್ಯ ಕಶಿಪುವನ್ನು ಬಗೆದು ನಿನ್ನನ್ನೇ ನಂಬಿದ್ದ ಆ ರಾಕ್ಷಸನ ಮಗ ಪ್ರಹ್ಲಾದನನ್ನು ರಕ್ಷಿಸಿದ ಕಮಲನಾಭ ನೃಸಿಂಹನಲ್ಲವೆ.

೫ – ಗೂನನಂತೆ ಬಂದು ಬಲಿಯನ್ನು ದಾನಬೇಡಿ, ಭೂಮಿಯನ್ನೂ ಅಂತರಿಕ್ಷವನ್ನೂ ಎರಡು ಹೆಜ್ಜೆಗಳಿಂದ ಅಳೆದು (ಮೂರನೆಯದಕ್ಕೆ) ಬಲಿಯನ್ನು ಪಾತಾಳಕ್ಕೆ ಒತ್ತಿದ ವಾಮನನಲ್ಲವೆ !

೬ – ಕೊಡಲಿಯನ್ನು ಹಿಡಿದು ಕ್ಷತ್ರಿಯರನ್ನೆಲ್ಲ ಸವರಿ, ಹೆತ್ತ ತಾಯಿಯ ಶಿರವನ್ನೇ ಕತ್ತರಿಸಿ, ಮತ್ತೆ ಆಕೆಯ ಪ್ರಾಣವನ್ನು ಹಿಂದಕ್ಕೆ ಪಡೆದ ಪರಶುರಾಮ ಪ್ರಭುವಲ್ಲವೆ !

೭ – ಹತ್ತುತಲೆಯ ರಾವಣನ ಕುತ್ತಿಗೆಯನ್ನು ಹಾರಿಸಿ (ಮೂಲಬಲಸಂಹಾರ ಕಾಲದಲ್ಲಿ ಮಾತ್ರ ಅನಂತರೂಪದಿಂದ ಕಾಣಿಸಿಕೊಂಡು) ಮತ್ತೆ ಏಕ ರೂಪನಾಗಿ ಭಕ್ತನಾದ ವಿಭೀಷಣನಿಗೆ ಲಂಕಾರಾಜ್ಯಾಧಿಪತ್ಯವನ್ನು ಕೊಟ್ಟ ರಾಮಚಂದ್ರಪ್ರಭುವಲ್ಲವೆ !

೮ – ಹದಿನಾರುಸಾವಿರಸ್ತ್ರೀಯರ ಕೂಟದಲ್ಲಿ ಸರಸ–ಸಲ್ಲಾಪದಲ್ಲಿದ್ದೂ ಬಾಲಕ ನಂತೆ ನಿನ್ನ ಹೃದಯದಲ್ಲಿ ನಿರ್ವಿಕಲ್ಪನಾಗಿದ್ದ ಲಕ್ಷ್ಮೀಪತಿಯಲ್ಲವೆ!

೯ – ಕಾಂತಿಯುಕ್ತನಾಗಿ (ಅಥವ ಮೊದಲೆ ಒಪ್ಪಿಕೊಂಡಿದ್ದಂತೆ) ಬಂದು ಹಿಪ್ಪೆಯ ಗಿಡಗಳ ಕಾಡಿನಲ್ಲಿ (ಗಿಡಗಳ ಗುಂಪಿನ ನಡುವೆ) ನಿಂತ ಸರ್ಪಶಯನನೆ ನೀನು ತ್ರಿಪುರರನ್ನು ಸಂಹರಿಸಿದವ (ಬುದ್ಧ)ನಲ್ಲವೆ !

೧೦ – ಬೆಳೆದ ಇಲ್ಲವೆ ವೃದ್ಧಿಯಾಗುತ್ತಲಿರುವ ಈ ಕಲಿಯಲ್ಲಿ ಅವತರಿಸುವವನು ನಮ್ಮ ದೇವನು. ಭೂಮಿ, ಸ್ವರ್ಗ, ಪಾತಾಳಕ್ಕೆ ಒಡೆಯನಾದವನು ನಮ್ಮ ಸುಂದರನಾದ ಈ ಹಯವದನ ದೇವನು.

ವಿ. ವಿ:- ಸಾಮಕ = ಸಾಮವೇದಿ ಅಥವಾ ಆ ವೇದಬಲ್ಲವ; ಅಡ್ಡಗೆಡಹಿ-ಅಡ್ಡಬೀಳುವಂತೆ (ನಮಸ್ಕರಿಸುವಂತೆ) ಮಾಡಿ; ಚಿನ್ನಗಣ್ಣಿನವ= ಹಿರಣ್ಯಾಕ್ಷ; ಅಂಬುಜನಾಭ = ತಾವರೆ ಯಂತೆ ಹೊಕ್ಕುಳುಳ್ಳವ; ಮುರುಡ = ಗೂನ, ವಕ್ರತೆ ಪಡೆದವ.

<u>ನಂಬಿದ ಪ್ರಹ್ಲಾದನ್ನ</u>:- ಶ್ರೀಹರಿಯಲ್ಲಿ ಪ್ರಹ್ಲಾದನ ನಂಬುಗೆ ಎಷ್ಟುಮಟ್ಟಿಗಿದ್ದಿ ತೆಂಬುದನ್ನು ಅರಿಯಲು ಆತನ ತಂದೆ ಹಿರಣ್ಯಕಶಿಪುವು ನಿನ್ನ ಹರಿಯು ಎಲ್ಲಿರುವನೆಂದು ಕೇಳಿದಾಗ-

ಪೃಥ್ವ್ಯಾಂ ಪಾಥಸಿ ಪಾವಕೇ ಚ ಪವನೇ ದಿಕ್ಷ್ವಂತರಿಕ್ಷೇ ಪುನ-
ರ್ಮಾರ್ತಾಂಡೇ ಶಶಿಮಂಡಲೇಸ್ತಿ ಸುತಲೇ ಯಚ್ಚೇತನಾಚೇತನೇ ।
ಅಸ್ತ್ಯಂತರ್ಬಹಿರಪ್ಯನಂತವಿಭವೇ ಭಾವೇಷ್ವಭಾವೇಪಿ ವಾ-
ಸರ್ವತ್ರಾಸ್ತಿ ಸದಾಸ್ತಿ ಕಿಂ ಬಹುತಯಾ ತ್ವಯ್ಯಸ್ತಿ ಮಯ್ಯಸ್ತಿ ಚ॥ ಎಂದರೆ ಪಂಚ

ಭೂತಗಳಲ್ಲೂ, ದಶದಿಕ್ಕುಗಳಲ್ಲೂ, ರವಿಚಂದ್ರರಲ್ಲೂ, ಒಳಗೂ, ಹೊರಗೂ, ಸಮಸ್ತ ಬ್ರಹ್ಮಾಂಡಲ್ಲಿನ ಚೇತನಾಚೇತನಗಳಲ್ಲೂ, ಒಟ್ಟಿನಲ್ಲಿ ಸರ್ವತ್ರ, ಸದಾ ನನ್ನಲ್ಲಿ ಹಾಗೂ ನಿನ್ನಲ್ಲಿ ಸಹಾ ಇದ್ದಾನೆ ಎಂದು ಹೇಳಿದ ಮಾತುಗಳು ಎಂತಹ ದೃಢನಂಬುಗೆಯವು!

<u>ಪಡೆದ ತಾಯ ಶಿರವ ಸೀಳಿ</u> : ಜಮದಗ್ನಿ ಋಷಿಗಳ ಮಗ ಪರಶುರಾಮನ ತಾಯಿ ರೇಣುಕೆ. ಈಕೆಯು ಸುವೇಣುವೆಂಬ ಮುನಿಯ ಮಗಳು. ಅಯೋನಿಜೆ. ಕಮಲದಲ್ಲಿ ಜನಿಸಿದವಳು, ಈಕೆಯು ನೀರುತರಲು ಗಂಗಾನದಿಗೆ ಹೋಗಿದ್ದಾಗ ಮಡದಿಯರೊಂದಿಗೆ ಜಲಕ್ರೀಡೆಯನ್ನಾಡುತ್ತಿದ್ದ ಚಿತ್ರರಥನೆಂಬ ಗಂಧರ್ವನನ್ನು ಕಂಡು ಮೋಹವಶಳಾಗಲು ಜ್ಞಾನದೃಷ್ಟಿಯಿಂದ ಅರಿತ ಜಮದಗ್ನಿಯು ಈಕೆಯ ಶಿರಸ್ಸನ್ನು ಛೇದಿಸುವಂತೆ ಮಗ ನಾದ ಪರಶುರಾಮನಿಗೆ ಆಜ್ಞೆ ಮಾಡಿದರು. ತಾಯಿ ರೇಣುಕೆಯೊಂದಿಗೆ ತಂದೆಯ ಆಜ್ಞೆಗೆ ತಲೆಬಾಗದಿದ್ದ ತನ್ನ ನಾಲ್ವರು ಅಣ್ಣಂದಿರನ್ನೂ ಅವನು ಸಂಹರಿಸಿದನು.

ಸಂತುಷ್ಟನಾದ ತಂದೆಯು ಮಗನಿಗೆ ಏನು ವರಬೇಕೆಂದು ಕೇಳಲು ಪರಶುರಾಮನು ತಾನು ಈಗ ಸಂಹರಿಸಿರುವವರೆಲ್ಲ ಪುನಃ ಎಚ್ಚರಗೊಳ್ಳುವಂತೆ ಕೇಳಿಕೊಂಡು ಎಲ್ಲರ ಪ್ರಾಣವನ್ನೂ ಹಿಂದಿರುಗಿಸಿದನು.

## ಸಂಕೀರ್ತನೆ-೫

**ಕೇಳು ಕೇಳಲೆ ಗೋಪಿ ನಿನ್ನಯ-ಬಾಲಕೃಷ್ಣನ ಚೇಷ್ಟೆಯ ।**
**ತಾಳಲಾರೆವು ನೀನು ಕರೆದು-ಹೇಳದಿದ್ದರೆ ಬುದ್ಧಿಯ ॥ ೧ ॥**
**ಮನೆ ಮನೆಗಳ ಪೊಕ್ಕು ಪೊಕ್ಕು-ಪಾನಮಾಡುವ ಬಾಲನು ।**
**ಮಾನಿನಿಯರು ಕಂಡು ತಡೆದರೆ-ಸ್ತನವಪಿಡಿದು ಮುದ್ದಿಪ ॥ ೨ ॥**
**ಬೆಳಕು ಇಲ್ಲದ ಎಡೆಯಲಿದ್ದರು-ಹೊಳೆವನೆ ಸುರಥೀಪತಿ ।**
**ಉಳಿಯದಂತೆ ಕದ್ದುಮೆದ್ದವ-ಬಾಲನೆಂಬುದು ಉಚಿತವೆ ॥ ೩ ॥**
**ಪರರ ನಷ್ಟವು ಲಾಭವೀತಗೆ-ಪರರಪೀಡೆಯು ಲೀಲೆಯು ।**
**ಪರರು ಈಪರಿ ತನ್ನನೆಂದರೆ-ಪರಮ ಹರುಷವ ಮಾಡುವ ॥ ೪ ॥**
**ಎಲ್ಲರಂತವನಲ್ಲ ದೇವನು ಒಲ್ಲದೇ ಮನಚಿತ್ತವು ।**
**ನಲ್ಲ ಈ ಮಣಿ ಏನು ಮಹಿಮೆಯ ಬಲ್ಲನೇ ರಘು ತಿಲಕನೆ ॥ ೫ ॥**

ಸ. ಅ :- ಎಲೌ ಗೋಪಿ ನಿನ್ನ ಬಾಲಕೃಷ್ಣನ ತುಂಟಾಟವನ್ನು ಆಲಿಸು । ನೀನು ಅವನನ್ನು ಕರೆದು ಸರಿಯಾಗಿ ಬುದ್ಧಿ ಹೇಳದಿದ್ದರೆ ನಾವು ಇನ್ನು ಸಹಿಸಲು ಸಾಧ್ಯವಾಗುವಂತಿಲ್ಲ.

೨ – ಮನೆ ಮನೆಯನ್ನೂ (ಪ್ರತಿಮನೆಯನ್ನೂ) ಹೊಕ್ಕು ಅಲ್ಲಿನ ಹಾಲು ಮೊದಲಾದುವನ್ನು ಕುಡಿಯುತ್ತಾನೆ. ಅದನ್ನು ಕಂಡು ಹೆಂಗಸರು ಕರೆದರೆ ಅವರಲ್ಲಿಗೆ ಹೋಗಿ ಅವರ ಸ್ತನಗಳನ್ನೇ ಹಿಡಿದುಕೊಂಡು ಮುದ್ದಿಕ್ಕುವನು.

೩ – ಬೆಳಕು ಇಲ್ಲದಿರುವ ಕಡೆಯಲ್ಲಿ ತಾನಿದ್ದರೂ (ಸು-ರಥೀ-ಪತಿ) ಒಳ್ಳೆಯ ತೇರುಳ್ಳ ಪ್ರಕಾಶಮಾನನಾದ ಸೂರ್ಯನ ಒಡೆಯನಾಗಿದ್ದಾನೆ. (ಸೂರ್ಯಮಂಡಲ ಮಧ್ಯವರ್ತಿಯಾಗಿ ಬೆಳಗುತ್ತಿದ್ದಾನೆ ಎಂಬ ಭಾವವಿರಬೇಕು) ಸ್ವಲ್ಪವೂ (ಹಾಲು, ಬೆಣ್ಣೆ, ಮೊದಲಾದುವು) ಮಿಗದಂತೆ ಕದ್ದು ತಿನ್ನುವ ಇವನನ್ನು ಬಾಲನೆನ್ನಲಾದೀತೆ ?

೪ – ಹೊರಗಿನವರ ನಷ್ಟವು ಇವನಿಗೆ ಲಾಭದೊರಕಿದಂತೆ, ಅನ್ಯರು ಹಿಂಸೆ ಪಡುವುದನ್ನು ಕಂಡು ಈತನಿಗೆ ಆಟದಂತಾಗಿದೆ. ಇವನು ಇಂತಹವನೆಂದು ಇತರರು ಬೆಟ್ಟು ಮಾಡಿ ತೋರಿಸಿದರೆ ಇವನಿಗೆ ಬಹಳ ಸಂತೋಷ.

೫ – ಈ ದೇವನು ಎಲ್ಲರಂತಲ್ಲ. (ನಮ್ಮ ಮನಸ್ಸು ಬೇರೊಂದನ್ನೂ ಯೋಚಿಸದು.) ರತ್ನ ಸದೃಶನಾದ ರಘುಕುಲಕ್ಕೆ ತಿಲಕಪ್ರಾಯನಾದ ಸೊಗಸುಗಾರನಾದ ಈತನು ಅದೇನು ಮಹಿಮನೊ ! ಅರಿಯುವುದೇ ಅಸಾಧ್ಯವಾಗಿದೆ.

ವಿ. ವಿ:- [ಈ ಬಾಲಕೃಷ್ಣನ ಲೀಲೆಯು ಇತರ ಮಕ್ಕಳಂತಲ್ಲ. ಉದಾಸೀನ ಮಾಡಲೂ, ಮರೆಯಲೂ ಸಾಧ್ಯವಿಲ್ಲ. ಇವನ ಸಮಸ್ತ ಚೇಷ್ಟೆಯೂ ಸಹನವಾಗಿಯೇ ಇದೆ ಎಂಬ ಭಾವವಿದೆ.]

## ಸಂಕೀರ್ತನೆ-೬

ದೇವರ ದೇವನೆ ಬಾರೊ–ದೇವಕಿನಂದನ ಬಾರೊ
ದೇವೇಂದ್ರನ ಸಲಹಿದ–ದೇವ ಬಾರೊ ಹರಿಯೆ || ಪ ||
ಮತ್ಸ್ಯನಾಗಿ ಶ್ರುತಿಯ ತಂದಿತ್ತ–ಭಕ್ತವತ್ಸಲನೆ
ಭೃತ್ಯ ಸತ್ಯವ್ರತನೆಂದು ಪೊತ್ತೆ ಬಾರೊ ಹರಿಯೆ || ೧ ||
ಸಾರಿದ ಸುರರಿಗಾಗಿ–ನೀರೊಳಗೆ ಮುಳುಗಿದ-
ಗಿರಿಯನುದ್ಧರಿಸಿದ-ಕೂರ್ಮ ಬಾರೊ ಹರಿಯೆ || ೨ ||
ಧರೆಯನುದ್ಧರಿಸಲು–ವರಾಹಾವತಾರನಾಗಿ ।
ಹಿರಣ್ಯಾಕ್ಷನ ಗೆಲಿದ–ಧೀರ ಬಾರೊ ಹರಿಯೆ || ೩ ||
ನಂಬಿದ ಭಕ್ತರ ಕಾವನೆಂಬ ಕರುಣದಿ ಕಲ್ಲ–
ಕಂಭದಿಂದಲುದಿಸಿದ ಡಿಂಭ ಬಾರೊ ಹರಿಯೆ || ೪ ||
ಮಾಣವಕವೇಷನಾಗಿ ಕ್ಷೋಣಿಯನಳೆದವನೆ ।
ದಾನವರ ಸೋಲಿಸಿದ–ಜಾಣ ಬಾರೊ ಹರಿಯೆ || ೫ ||
ಝಡಿದು ದುಷ್ಟನೃಪರ ಗಡಣವ ಬಿಡದಲ್ಲ
ಪಿಡಿದುಗ್ರಕೊಡಲಿಯ–ಪ್ರೌಢ ಬಾರೊ ಹರಿಯೆ || ೬ ||
ವೃಂದಾರಕವಂದ್ಯ ಸೇತುಬಂಧನಕ್ಕೆ ಹಾರಿದ ದಶ-
ಕಂಧರನ್ನ ಕೊಂದ ರಾಮಚಂದ್ರ ಬಾರೊ ಹರಿಯೆ || ೭ ||
ಮಲ್ಲರನ್ನೆಲ್ಲರ ಸೀಳಿ-ಬಲ್ಲಿದ ಮಾವನ ಕೊಂದ ।
ಗೊಲ್ಲರಿಗೊಲ್ಲಭ ಲಕ್ಷ್ಮೀನಲ್ಲ ಬಾರೊ ಹರಿಯೆ || ೮ ||
ಬುದ್ಧನಾಗಿ ದೈತ್ಯರಿಗೆ ಬುದ್ಧ ಬೌದ್ಧಮಯ ತೋರಿ ।
ರುದ್ರನ ಗೆಲಿಸಿದ ಸುಭದ್ರ ಬಾರೊ ಹರಿಯೆ || ೯ ||
ಕರ್ಕಶದ ಕಳ್ಳರನ್ನು ಕಲ್ಕಿರೂಪನಾಗಿ ಮೇಲೆ-
ಶಿಕ್ಷಿಸುವ ಸುಜನರ ಪಕ್ಷ ಬಾರೊ ಹರಿಯೆ || ೧೦ ||
ವಿಜಯ ಶ್ರೀ ಹಯವದನ-ಭಜಕರ ಭಾಗ್ಯವೆ ।
ಸುಜನಾಬ್ಧಿಯ ವಾದಿರಾಜನ–ತೇಜ ಬಾರೊ ಹರಿಯೆ || ೧೧ ||

ಸ. ಅ :- ದೇವದೇವನೆ, ದೇವಕಿಯ ಕುಮಾರನೆ, ದೇವೇಂದ್ರನನ್ನು ರಕ್ಷಿಸಿದ ದೇವನೆ, ಹರಿಯೆ, ದಯೆಮಾಡು.

ಚ. ೧ –ಮೀನಾಗಿ ವೇದವನ್ನು ತಂದುಕೊಟ್ಟವನೆ, ಭಕ್ತರಲ್ಲಿ ವಾತ್ಸಲ್ಯವುಳ್ಳವನೆ, ಸತ್ಯವ್ರತನು ನಿನ್ನ ಸೇವಕನೆಂದು ಹೊತ್ತು ರಕ್ಷಿಸಿದ ಹರಿಯೆ ದಯಮಾಡು||

೨ – ನಿನ್ನನ್ನು ಮರೆ ಹೊಕ್ಕ ದೇವತೆಗಳಿಗೋಸ್ಕರ ನೀರಿನಲ್ಲಿ ಮುಳುಗಿ ಮಂದರ ಪರ್ವತವನ್ನು ಎತ್ತಿದ ಕೂರ್ಮರೂಪಿಯೆ ದಯಮಾಡು.

೩ – ಭೂಮಿಯನ್ನು ಉದ್ಧರಿಸಲು ವರಾಹಾವತಾರವೆತ್ತಿ ಹಿರಣ್ಯಾಕ್ಷನೆಂಬ ಅಸುರನನ್ನು ಗೆದ್ದ ಧೀರನಾದ ಹರಿಯೆ ದಯಮಾಡು.

೪ – ನಂಬಿದ ಭಕ್ತರನ್ನು ರಕ್ಷಿಸುವೆನೆಂಬ ಕರುಣೆಯಿಂದ ಕಲ್ಲಿನ ಕಂಭದಿಂದ ಉದ್ಭವಿಸಿದ ನೃಸಿಂಹಶರೀರಿಯೆ ದಯಮಾಡು.

೫ – ಹುಡುಗನ (ಬ್ರಹ್ಮಚಾರಿಯ) ವೇಷದಿಂದ ಭೂಮಿಯನ್ನು ಅಳೆದವನೆ, ದಾನವರನ್ನು ಸೋಲಿಸಿದ ಬುದ್ಧಿವಂತನಾದ ಹರಿಯೆ ದಯಮಾಡು.

೬ – ದುಷ್ಟರಾದ ರಾಜರುಗಳನ್ನೆಲ್ಲರನ್ನೂ ಬಿಡದೆ ಹತ್ತಿಕ್ಕಿದ, ಕೊಡಲಿಯನ್ನು ಹಿಡಿದ ಭಯಂಕರನಾದ (ಪರಶುರಾಮನ ರೂಪಿನ) ಪ್ರಬುದ್ಧ ಹರಿಯೆ ದಯಮಾಡು.

೭ – ದೇವತೆಗಳಿಂದ ನಮಸ್ಕೃತನೆ, ಸೇತುವೆಯನ್ನು ಕಟ್ಟಲು ಹೋಗಿ ಹತ್ತು ಕುತ್ತಿಗೆಯವನನ್ನು (ರಾವಣನನ್ನು) ಸಂಹರಿಸಿದ ರಾಮಚಂದ್ರರೂಪಿನ ಹರಿಯೆ ದಯಮಾಡು.

೮ – ಜಟ್ಟಿಗಳನ್ನೆಲ್ಲರನ್ನೂ ಸೀಳಿ, ಬಲವಂತನಾಗಿದ್ದ (ಕಂಸ) ಮಾವನನ್ನು ಕೊಂದ, ಗೊಲ್ಲರಿಗೆ ಒಡೆಯನೆ, ಲಕ್ಷ್ಮೀದೇವಿಯ ಪ್ರಿಯನಾದ ಹರಿಯೆ ದಯಮಾಡು.

೯ – ಬುದ್ಧಾವತಾರತಾಳಿ ದೈತ್ಯರಾದ ಜಿನಾದಿಗಳ ಬುದ್ಧಿಯನ್ನು ಮೋಹಗೊಳಿಸಿ, ಬುದ್ಧಿವಂತರಾದ ದೇವತೆಗಳಿಗೆ ಸಮೀಚೀನವಾದ ದಯಾಪೂರ್ಣರೂಪವನ್ನು ತೋರಿಸಿ, ರುದ್ರನನ್ನು ಗೆಲ್ಲಿಸಿದ ಮಂಗಳಕರನಾದ ಹರಿಯೆ ದಯಮಾಡು.

೧೦ – ಕಠಿಣರಾದ ಕಳ್ಳರುಗಳನ್ನು ಮುಂದೆ ಕಲ್ಕಿಯಾಗಿ ಅವತರಿಸಿ ಶಿಕ್ಷಿಸುವ, ಸತ್ಪುರುಷರ ಪಕ್ಷಪಾತಿಯಾದ ಹರಿಯೆ ದಯಮಾಡು.

೧೧ – ವಿಶೇಷವಾದ ಜಯವುಳ್ಳ ಶ್ರೀ ಹಯವದನನೆ, ಸೇವಿಸುವವರಿಗೆ ಭಾಗ್ಯರೂಪನೆ, ಸತ್ಪುರುಷರೆಂಬ ಸಮುದ್ರದ ಹಾಗೂ ವಾದಿರಾಜನ ಕಾಂತಿರೂಪನೆ, ಹರಿಯೆ ದಯಮಾಡು (ಅನುಗ್ರಹಿಸು)

ವಿ: ವಿ:- ವಾದಿರಾಜರಿಂದ ರಚಿಸಲ್ಪಟ್ಟಿರುವ ಈ ದಶಾವತಾರ ಕೃತಿಯಲ್ಲಿ ಬೌದ್ಧಾವತಾರದಂತೆ ಮತ್ಸ್ಯಾವತಾರವೂ ಎರಡು ವೇಳೆ ಎಂದು ತೋರುತ್ತದೆ. ವರಾಹಾವತಾರವೂ ಎರಡು ವೇಳೆ ಎಂದು ಅರಿವಿಗೆ ಬರುತ್ತದೆ.

ಶೃತಿ = ವೇದ; ಡಿಂಭ = ಶರೀರ.

<u>ಮತ್ಸ್ಯಾವತಾರ :-</u>

ಜಗನ್ನಾಥದಾಸರು ತತ್ವಸುವ್ವಾಲಿಯಲ್ಲಿ :-

ವೇದ ತತಿಗಳನು ಕದ್ದೊಯ್ದವನ ಕೊಂದು ಪ್ರಳ-
ಯೋದಧಿ ಯೊಳಗೆ ಚರಿಸಿ-ದಿ| ಚರಿಸಿ ವೈವಸ್ವತನ
ಕಾಯ್ದ ಮಹಮಹಿಮ ದಯವಾಗೋ ||೧೯|| ಎಂದು ಹೇಳಿದ್ದಾರೆ.

ಬ್ರಹ್ಮನ ಪ್ರತಿದಿನದ ಹಗಲು ಕಳೆಯಲು ಒಂದು ಪ್ರಳಯವಾಗುವುದು. ಆಗ ಭೂಮಿ, ಅಂತರಿಕ್ಷ, ಸ್ವರ್ಗ ಈ ಮೂರು ಲೋಕಗಳೂ ನಾಶವಾಗುವುವು. ಹಗಲಿನಷ್ಟೇ ರಾತ್ರಿಯುಳ್ಳ ಆ ಪ್ರಳಯಕಾಲದಲ್ಲಿ ಬ್ರಹ್ಮನ ಮುಖದಿಂದ ಹೊರಡುತ್ತಿದ್ದ ವೇದಗಳನ್ನು ಹಯಗ್ರೀವಾಸುರನು ಅಪಹರಿಸಿ ಜಲವನ್ನು ಹೊಕ್ಕನು. ಆಗ ಹರಿಯು ಮತ್ಸ್ಯರೂಪ ತಾಳಿ ಪ್ರಳಯ ಜಲದಲ್ಲಿ ಮುಳುಗಿದ್ದ ಹಯಗ್ರೀವಾಸುರನನ್ನು ಕೊಂದು ವೇದಗಳನ್ನು ರಕ್ಷಿಸಿದನು. ಇದು ಮೊದಲನೆಯ ಮತ್ಸ್ಯಾವತಾರವು.

ಈಗ ನಡೆಯುತ್ತಿರುವುದು ವೈವಸ್ವತ ಮನ್ವಂತರ. ಇದರ ಹಿಂದಿನದು ಚಾಕ್ಷುಷ ಮನ್ವಂತರವು. ಆ ಮನ್ವಂತರವು ಮುಗಿಯುವುದಕ್ಕೆ ಮುಂಚೆ ಸತ್ಯವ್ರತನೆಂಬ ರಾಜನಿಗೆ ಹರಿಯು ಮತ್ಸ್ಯರೂಪದಲ್ಲಿ ಕಾಣಿಸಿಕೊಂಡು ಮುಂದೆ ಒದಗುವ ಮನ್ವಂತರ ಪ್ರಳಯದಿಂದ [ಬ್ರಹ್ಮನ ಒಂದು ದಿನ ಕಲ್ಪದಲ್ಲಿ ಹದಿನಾಲ್ಕು ಮನುಕಲ್ಪಗಳುಂಟು] ಪಾರಾಗುವ ಉಪಾಯವನ್ನು ಹೇಳಿ ಆತನು ಮನುವಾಗಲು ಬೇಕಾದ ಜ್ಞಾನೋಪದೇಶವನ್ನು ಕೊಟ್ಟನು. ಸತ್ಯವ್ರತನು ಭಗವಂತನ ಆಜ್ಞೆಯಂತೆ ಅದಕ್ಕಾಗಿ ಏರ್ಪಟ್ಟಿದ್ದ ನಾವೆಯಲ್ಲಿ ಕುಳಿತಿರಲು ಪ್ರಳಯವಾದಾಗ ಆ ನಾವೆಯು ಜಲದಲ್ಲಿ ಮುಳುಗದಂತೆ ಎರಡನೆಯಾವರ್ತಿ ಹರಿಯು ಮತ್ಸ್ಯರೂಪಿಯಾಗಿದ್ದು ರಕ್ಷಿಸಿದನು. ಈ ಮನ್ವಂತರದಲ್ಲಿ ಸೂರ್ಯಪುತ್ರನಾಗಿ ಜನಿಸಿ ಮನುವಾಗಿರುವ ಶ್ರಾದ್ಧದೇವನೆ ಆ ಸತ್ಯವ್ರತನು. ಇವನನ್ನೇ ವಾದಿರಾಜರು ತಮ್ಮ ಈ ಕೃತಿಯ ಪ್ರಥಮ ಚರಣದಲ್ಲಿ ಸೂಚಿಸಿದ್ದಾರೆ.

ವರಾಹಾವತಾರ :-

ಸೋಮಪನ ನುಡಿಕೇಳಿ ಹೇಮಾಂಬಕನ ಕೊಂದಿ
ಭೂಮಿಯ ನೆಗಹಿದಿ ದಾಡಿಂದ । ದಾಡಿಂದ ನೆಗಹಿದ
ಸ್ವಾಮಿ ಭೂವರಹ ದಯವಾಗೋ [ತ. ಸು. ೧೪೧.]

ಸೋಮಪಾನಕ್ಕೆ ಅರ್ಹರಾದ ದೇವತೆಗಳಲ್ಲಿ ಬ್ರಹ್ಮನಿಗೆ ಅಗ್ರಸ್ಥಾನವು. ಆದುದರಿಂದ ಇವನು ಸೋಮಪನೆಂದು ಕರೆಯಲ್ಪಟ್ಟಿದ್ದಾನೆ. ಇವನು ತನ್ನ ಪುತ್ರ ಸ್ವಾಯಂಭುವ ಮನುವಿಗೆ ಪ್ರಜಾಸೃಷ್ಟಿ ಮಾಡಲು ಸ್ಥಾನವನ್ನು ಕಲ್ಪಿಸಿಕೊಡಲಾರದೆ (ಪ್ರಳಯ ಜಲದಲ್ಲಿ ಭೂಮಿಯು ಮುಳುಗಿದ್ದುದರಿಂದ) ಶ್ರೀಹರಿಯನ್ನು ಪ್ರಾರ್ಥಿಸಿದನು. ಆಗ ಹರಿಯು ಅಂಗುಷ್ಠ ಪ್ರಮಾಣದ ವರಾಹರೂಪದಲ್ಲಿ ಬ್ರಹ್ಮನ ನಾಸಿಕದಿಂದ ಹೊರಕ್ಕೆ ಬಂದು ಬೃಹತ್ತಾಗಿ ಬೆಳೆದು ಪ್ರಳಯ ಜಲವನ್ನು ಪ್ರವೇಶಿಸಿ ಇವನನ್ನು ಇದಿರಿಸಿದ ಹಿರಣ್ಯಾಕ್ಷನನ್ನು (ಇವನೂ ಬ್ರಹ್ಮನಿಂದಲೇ ಸೃಷ್ಟಿಯಾಗಿದ್ದವನು.) ತನ್ನ ಕೋರೆ ದಾಡೆಯಿಂದ ಬಡಿದು ಕೊಂದು ದಾಡೆಯ ಮೇಲಿಂದಲೇ ಭೂಮಿಯನ್ನು ಎತ್ತಿ ಮೇಲಕ್ಕೆ ತಂದನು. ಇದು ಹರಿಯುತಾಳಿದ ಪ್ರಥಮ ವರಾಹಾವತಾರವು.

ವೈಕುಂಠದ ದ್ವಾರಪಾಲಕನಾಗಿದ್ದ ವಿಜಯನು ಶಾಪಗ್ರಸ್ಥನಾಗಿ ಹಿರಣ್ಯಾಕ್ಷನಾಗಿ ಜನಿಸಿ ಭೂಮಿಯನ್ನು ಎತ್ತಿ ಸಮುದ್ರದಲ್ಲಿ ಮುಳುಗಿಸಲು, ಹರಿಯು ಎರಡನೆಯ ಸಲ ವರಾಹಾವತಾರವೆತ್ತಿ ಹಿರಣ್ಯಾಕ್ಷನನ್ನು ಸಂಹರಿಸಿ ಭೂಮಿಯನ್ನು ಉದ್ಧರಿಸಿದನು.

ಸೂ :- [ನಾಲ್ಕನೆಯ ಸಂಕೀರ್ತನೆ-'ಗೋವಿಂದ ಗೋವಿಂದ' ಎಂಬುವುದರಲ್ಲಿ 'ಎರಡ್ಹೊನ್ನು ರೂಪವತಾಳಿದಸುರನ' ಎಂದು ಹೇಳಿರುವುದು ಹಿರಣ್ಯಾಕ್ಷನ ಈ ಎರಡು ರೂಪಗಳನ್ನು ಕುರಿತೇ ಇರಬೇಕು.]

ಕಲ್ಲುಕಂಭದಿಂದಲುದಿಸಿದ ಡಿಂಭ:- ಹಿರಣ್ಯಕಶಿಪುವಿನ ಮಗ ಪ್ರಹ್ಲಾದನು ತನ್ನ ತಂದೆಗೆ ಹರಿಯು ಸರ್ವತ್ರ ಇರುವನೆಂದಾಗ ಈ ಕಲ್ಲುಕಂಭದಲ್ಲಿ ತೋರೆಂದು ಅವನು ಕೇಳಲು

ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ ।
ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।
ಅದೃಶ್ಯತಾತ್ಯದ್ಭುತರೂಪಮುದ್ವಹನ್ ।
ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್॥ [ಭಾಗ-೭-೧೮] ಎಂದರೆ ಹರಿಯು ತನ್ನ ಸೇವಕನ (ಭಕ್ತನ) ಮಾತನ್ನು ಸತ್ಯವೆಂದು ತೋರಿಸಲು ಆ ಕಂಭದಲ್ಲಿ ಮೃಗವೂ ಅಲ್ಲದ, ಮನುಷ್ಯನೂ ಅಲ್ಲದ ಅದ್ಭುತವಾದ ರೂಪವನ್ನು ತಳೆದು (ನೃಸಿಂಹನಾಗಿ) ಆವಿರ್ಭವಿಸಿದನು.

<u>ರುದ್ರನ ಗೆಲಿಸಿದ:-</u> ಈ ಸಂಬಂಧದಲ್ಲಿ ವಾದಿರಾಜರು ಬದರೀಕ್ಷೇತ್ರದಲ್ಲಿ ರಚಿಸಿದ 'ಧಾತರ್ದೇವಸಮೂಹ' ಎಂಬ ಪದ್ಯವನ್ನು ವ್ಯಾಖ್ಯಾನಿಸುವಾಗ ಟೀಕಾಕಾರರು ರುದ್ರನನ್ನು ಗೆಲ್ಲಿಸಲು:-

೧ ವಿಷ್ಣುವು ಬುದ್ಧನಾಗಿ ತ್ರಿಪುರ ಸ್ತ್ರೀಯರ ಪ್ರಾತಿವ್ರತ್ಯ ಹರಣ ಮಾಡಿದುದನ್ನೂ;

೨ ಈಶ್ವರನ ರಥವಾಗಿದ್ದ ಭೂಮಿಯು ಹೂತುಕೊಳ್ಳಲು-'ಶಂಭು ತ್ರಿಪುರದಾಹೈಕಸ್ಥೈರ್ಯ ವಿಶ್ವರಥೋದ್ವಹಃ' ಎಂದು ವಾಸುದೇವ ಸಹಸ್ರನಾಮದಲ್ಲಿರುವಂತೆ ತಾನು ವೃಷಭಾವತಾರವೆತ್ತಿ ತನ್ನ ಕೊಂಬುಗಳಿಂದ ಆ ಭೂರಥವನ್ನು ಮೇಲಕ್ಕೆ ಎತ್ತಿ ಹಿಡಿದು ತ್ರಿಪುರ ದಹನಕ್ಕೆ ಸಹಾಯ ಮಾಡಿದುದನ್ನೂ;

೩ ತ್ರಿಪುರಗಳ ಒಳಗೆ ಅಮೃತದ ಭಾವಿಯೊಂದಿದ್ದು ಸತ್ತ ರಾಕ್ಷಸರೆಲ್ಲ ಆ ಅಮೃತದಿಂದ ಬದುಕುತ್ತ ಬರಲು ಅವರುಗಳನ್ನು ಗೆಲ್ಲುವುದು ಶಿವನಿಗೆ ಸಾಧ್ಯವಾಗುವಂತೆ ಹರಿಯು ಗೋರೂಪ ತಾಳಿ 'ಭಕ್ತ ಶಂಭುಕೃತೇ ದೈತ್ಯಾಮೃತವಾಪೀ ಸಮುಸ್ರುಪಃ' ಎಂಬ ವಾಸುದೇವ ಸಹಸ್ರನಾಮಾಧಾರದಂತೆ ಅಮೃತವೆಲ್ಲವನ್ನೂ ಕುಡಿದು ಅವನಿಗೆ ಜಯ ದೊರಕಿಸಿಕೊಟ್ಟಿದುದನ್ನೂ;

೪ ಶಿವನು ತಾನೇ ಕೊಟ್ಟ ವರದಿಂದ ಭಸ್ಮಾಸುರನ ಹಿಂಸೆಗೆ ಒಳಗಾದಾಗ ವಿಷ್ಣು ಮೋಹಿನೀ ರೂಪ ತಾಳಿ ಅಸುರನನ್ನು ಮೋಹಗೊಳಿಸಿ ಉಪಾಯದಿಂದ ಅವನನ್ನು ಭಸ್ಮಗೊಳಿಸಿದುದನ್ನೂ;

೫ ಅಂಧಕಾಸುರನನ್ನು ಈಶ್ವರನು ಸಂಹರಿಸಲುದ್ಯುಕ್ತನಾದಾಗ ಆ ಅಸುರನ ದೇಹದ ಪ್ರತಿಯೊಂದು ತೊಟ್ಟು ರಕ್ತಕ್ಕೂ ಕೋಟಿ ಅಂಧಕರು ಉತ್ಪನ್ನರಾಗುತ್ತಿರಲು ನರಸಿಂಹ ರೂಪಿಯಾದ ನಾರಾಯಣನು ಸಹಸ್ರ ಶಕ್ತಿ ದೇವತೆಯನ್ನು ಸೃಷ್ಟಿಸಿ ಅಂಧಕನ ರಕ್ತವು ಕೆಳಕ್ಕೆ ಬೀಳದಂತೆ ತಡೆದು ಅವನ ವಧೆಗೆ ಸಹಕರಿಸಿದುದನ್ನೂ;

೬ ನರಸಿಂಹರೂಪನು ಸೃಷ್ಟಿಸಿದ ಆ ಸಹಸ್ರ ಶಕ್ತಿಯ ಯೋಗಿನಿಯು ರಕ್ತಪಿಪಾಸೆಯಿಂದ ಈಶ್ವರನನ್ನೇ ಭಕ್ಷಿಸಲು ಬಂದಾಗ ಹೆದರಿದ ಶಿವನು ಕುರಿಗಳ ಹಿಂಡೊಂದರಲ್ಲಿ ಹೊಕ್ಕು ತಾನೂ ಕುರಿಯ ರೂಪದಲ್ಲೇ ಇದ್ದರೂ ಅಲ್ಲಿಗೂ ಆ ಯೋಗಿನಿಯು ಅರಸಿಕೊಂಡು ಬರಲು ಹರಿಯು ಪಾತಾಳದಿಂದ ಚಿಂತಾಮಣಿ ನರಸಿಂಹನಾಗಿ ಉದ್ಭವಿಸಿ ಕುರಿಯ ರೂಪದ ಈಶ್ವರನನ್ನೇ ವಾಹನವನ್ನಾಗಿ ಮಾಡಿಕೊಂಡು ಆ ಯೋಗಿನಿಯನ್ನು ನಿವಾರಿಸಿದನೆಂಬ ವಿಷಯವನ್ನು 'ಯೋಗಿನೀ ಚಕ್ರಗುಹ್ಯೇಚ। ಯೋಗಿನೀತ್ರಸ್ತ ಗಿರಿಶತ್ರಾತಾ ಮೇಷ ರೂಪಿ ಶಂಕರ ವಾಹನಃ' (ವಾಸುದೇವ ಸಹಸ್ರನಾಮ)-ಹೀಗೆ ವಿವರಿಸಿ ಹರಿ ಸರ್ವೋತ್ತಮತ್ವವನ್ನು ಎತ್ತಿ ಹೇಳಿದ್ದಾರೆ.

## ಸಂಕೀರ್ತನೆ-೭

ದಾವಕುಲವೆಂದರಿಯಬಾರದು–ಗೋವಕಾವ ಗೊಲ್ಲನಂತೆ ||ಪ||
ತಾನು ಪೋಗಿ ಪಾರಿಜಾತದ ಹೂವ ಸತಿಗೆ ತಂದನಂತೆ ||ಅ. ಪ.||
ಗೋಕುಲದಲ್ಲಿ ಪುಟ್ಟಿದನಂತೆ–ಗೋವ್ರುಗಳನೆ ಕಾಯ್ದನಂತೆ |
ಕೊಳಲನೂದಿ ಮೃಗಪಕ್ಷಿಗಳ–ಮರುಳುಮಾಡಿದ ದೇವನಂತೆ || ೧ ||
ತರಳತನದಲಿ ಒರಳನೆಳೆದು–ಮರವ ಮುರಿದು ಮತ್ತಿಯ |
ತನ್ನೊಡಲ ಒಳಗೆ ಈರೇಳು ಜಗಂಗಳ ಪಡೆದು ತಾಯಿಗೆ ತೋರಿದನಂತೆ ||೨||
ಗೊಲ್ಲಸತಿಯರ ಮನೆಯ ಪೊಕ್ಕು–ಕಳ್ಳತನವ ಮಾಡಿದನಂತೆ |
ಬಲ್ಲಿದ ಪೂತನಿವಿಷವನುಂಡು–ಮೆಲ್ಲನೆ ತೃಣನಕೊಂದನಂತೆ || ೩ ||
ಕಾಲಿಲಿ ಶಕಟನ ಒದ್ದನಂತೆ–ಗೂಳಿಕೊಂಬನು ಕಿತ್ತನಂತೆ |
ಕಾಳಿಂಗನಾಗನ ಫಣವ ತುಳಿದು–ಬಾಲರಿಗೆಲ್ಲ ಒಲಿದನಂತೆ || ೪ ||
ಸರ್ಪ ತನ್ನ ಹಾಸಿಗೆಯಂತೆ–ಪಕ್ಷಿ ತನ್ನ ವಾಹನವಂತೆ |
ಮುಕ್ಕಣ್ಣ ತನ್ನ ಮೊಮ್ಮಗನಂತೆ–ಮುದ್ದುಮುಖದ ಚೆಲುವನಂತೆ || ೫ ||
ಕಡಲ ಮಗಳ ತಂದನಂತೆ–ಕರಡಿಯ ಮಗಳು ಮಡದಿಯಂತೆ |
ಕೊಡೆಯ ಪಿಡಿದು ಬೇಡಿದನಂತೆ–ಈರೇಳು ಲೋಕಕ್ಕೆ ಒಡೆಯನಂತೆ || ೬ ||
ಹಡಗಿನೊಳಗಿಂದ ಬಂದನಂತೆ–ಕಡಲತಡಿಯಲಿ ನಿಂದನಂತೆ |
ಗುರು ಮಧ್ವಮುನಿಗೆ ಒಲಿದನಂತೆ–ಹಯವದನ ಚೆಲುವನಂತೆ || ೭ ||

ಸ. ಅ :- (ಅವನದು) ಯಾವ ಕುಲವೆಂಬುದನ್ನು ತಿಳಿಯಬಾರದಂತೆ, ಅವನೊಬ್ಬ ಹಸುಗಳನ್ನು ಕಾಯುವ ಗೊಲ್ಲ. ಗೋಶಬ್ದಕ್ಕೆ ವೇದವೆಂಬ ಅರ್ಥವೂ ಇರುವುದರಿಂದ ಅವನು ವೇದರಕ್ಷಕನೂ ಹೌದು)

ಅ. ಅವನು (ಸ್ವರ್ಗಕ್ಕೆ ಹೋಗಿ) ಪಾರಿಜಾತ ಪುಷ್ಪವನ್ನು ತನ್ನ ಹೆಂಡತಿಗಾಗಿ ತಂದನಂತೆ.

ಚ. ೧ –ಗೋಕುಲದಲ್ಲಿ ಹುಟ್ಟಿದನಂತೆ, ಅಲ್ಲಿನ ಹಸುಗಳನ್ನು ಕಾಯ್ದನಂತೆ, ಕೊಳಲನ್ನೂದಿ ಅಲ್ಲಿನ ಮೃಗ-ಪಕ್ಷಿಗಳನ್ನೆಲ್ಲ ಮರುಳು ಮಾಡಿದ (ವಶಪಡಿಸಿಕೊಂಡ) ದೇವನಂತೆ.

೨ –ಎಳೆತನದಲ್ಲಿ (ತನ್ನನ್ನು ಕಟ್ಟಿ ಹಾಕಿದ್ದ) ಒರಳನ್ನೇ ಎಳೆದು ಮತ್ತೀಮರವನ್ನು (ಯಮಳಾರ್ಜುನರನ್ನು) ಮುರಿದನಂತೆ, ತನ್ನ ದೇಹದಲ್ಲೇ ಹದಿನಾಲ್ಕು ಲೋಕಗಳನ್ನು ಹೆತ್ತ ತಾಯಿಗೆ ತೋರಿಸಿದನಂತೆ.

೩ –ಗೊಲ್ಲಸ್ತ್ರೀಯರ ಮನೆಗೆ ನುಗ್ಗಿ (ಹಾಲು-ಬೆಣ್ಣೆಯನ್ನು (ಕಳ್ಳತನ ಮಾಡಿದನಂತೆ, ಬಲಿಷ್ಠಳಾದ ಪೂತನಿಯ ವಿಷವನ್ನು ಉಂಡು, ಸದ್ದಿಲ್ಲದ ಹಾಗೆ ತೃಣಾಸುರನನ್ನು ಕೊಂದನಂತೆ.

೪ –ಕಾಲಿನಲ್ಲಿ ಶಕಟನನ್ನು ಒದ್ದನಂತೆ, ಗೂಳಿಯ ಕೊಂಬನ್ನೇ ಕಿತ್ತನಂತೆ, ಕಾಳಿಂಗನೆಂಬ ಹಾವಿನ ಹೆಡೆಯನ್ನು ತುಳಿದು (ತನ್ನ ಓರಗೆಯ) ಹುಡುಗರಿಗೆಲ್ಲ ಪ್ರಿಯನಾದನಂತೆ.

೫ –ಹಾವು (ಆದಿಶೇಷ) ಆತನ ಹಾಸಿಗೆಯಂತೆ, ಪಕ್ಷಿಯು (ಗರುಡ) ವಾಹನವಂತೆ, ಮೂರು ಕಣ್ಣಿನವನು (ರುದ್ರನು) ಆತನ ಮೊಮ್ಮಗನಂತೆ. ಸುಂದರ ಮುಖದ ಅಂದಗಾರನಂತೆ.

೬ –ಸಮುದ್ರನ ಮಗಳನ್ನು (ಲಕ್ಷ್ಮೀದೇವಿಯನ್ನು) ಕರೆತಂದನಂತೆ, ಕರಡಿಯ (ಜಾಂಬವನ) ಮಗಳು (ಜಾಂಬವತಿಯು) ಹೆಂಡತಿಯಂತೆ, ಕೊಡೆಯನ್ನು ಹಿಡಿದು (ವಾಮನನಾಗಿ) ಬೇಡಿದನಂತೆ, ಹದಿನಾಲ್ಕು ಲೋಕಗಳಿಗೂ ಒಡೆಯನಂತೆ.

೭ –ಹಡಗಿನ ಮುಖಾಂತರ (ದ್ವಾರಕೆಯಿಂದ) ಬಂದನಂತೆ, ಸಮುದ್ರದಲ್ಲಿ (ಉಡುಪಿ ತೀರದಲ್ಲಿ) ನಿಂತನಂತೆ, ಗುರುಗಳಾದ ಮಧ್ವಾಚಾರ್ಯರೆಂಬ ಮುನಿಗಳಿಗೆ ಒಲಿದನಂತೆ, ಆ ಹಯಮುಖದ ಸ್ವಾಮಿಯು ಸುಂದರನಂತೆ.

ವಿ. ವಿ:- ತರಳತನ = ಬಾಲ್ಯ, ಎರಡು ಏಳು (ಈರೇಳು) = ಹದಿನಾಲ್ಕು.

ತನ್ನ ಒಡಲ ಒಳಗೆ .... ತೋರಿದನಂತೆ—ಬಾಲಕೃಷ್ಣನು ಮಣ್ಣು ತಿಂದನೆಂದು ಅಣ್ಣನಾದ ಬಲರಾಮನು ತಾಯಿಯೊಂದಿಗೆ ದೂರಿತ್ತಾಗ ತಾಯಿ ಯಶೋದೆಯು ಕೃಷ್ಣನ ಬಾಯಿಯನ್ನು ತೆರೆಸಿ ನೋಡಲು ಹದಿನಾಲ್ಕು ಲೋಕಗಳೂ ಅಲ್ಲಿ ಕಂಡುವಂತೆ.

ತೃಣನ ಕೊಂದನಂತೆ:-ತೃಣಾಸುರನು ಕಂಸನ ಕಡೆಯವನು. ಅವನು ಸುಂಟರ ಗಾಳಿಯ ರೂಪದಲ್ಲಿ ಬಂದು ರಾಮಕೃಷ್ಣರನ್ನು ಎತ್ತಿಕೊಂಡು ಹೋಗುತ್ತಿರಲು ಕೃಷ್ಣನು ತನ್ನ 'ಗರಿಮಾ' ಎಂಬ ಶಕ್ತಿಯಿಂದ ತೃಣನಿಗೆ ಎತ್ತಲಾಗದಷ್ಟು ಭಾರವಾಗಿ, ಅವನ ಕುತ್ತಿಗೆಯನ್ನು ಗುದ್ದಿ ಪ್ರಾಣ ಹರಣ ಮಾಡಿದನಂತೆ.

ಗೂಳಿಕೊಂಬನು ಕಿತ್ತನಂತೆ:- [ಮೂಲದಲ್ಲಿ 'ಗಾಳಿಕಂಭವ ಕಿತ್ತನಂತೆ' ಎಂದಿದೆ. ಪ್ರಾಯಶಃ ಅದು ಮುದ್ರಣ ದೋಷವಿರಬಹುದು] ಅರಿಷ್ಟಾಸುರನೆಂಬ ಅಸುರನು (ಕಂಸನ ಕಡೆಯವ) ಗೂಳಿಯ ರೂಪತಾಳಿ ರಾಮಕೃಷ್ಣರನ್ನು ಇರಿಯಲು ನುಗ್ಗಿದಾಗ ಕೃಷ್ಣನು ಅದರ ಕೊಂಬುಗಳನ್ನು ಹಿಡಿದು ಕಿತ್ತು ಅದನ್ನು ಸಂಹರಿಸಿದನಂತೆ.

## ಸಂಕೀರ್ತನೆ-೮

ಬುದ್ಧಿಯ ಹೇಳಮ್ಮ ನೀನು–ಮುದ್ದು ಬಾಲಕೃಷ್ಣಗೆ ।
ಕದ್ದು ಬೆಣ್ಣೆ ಮೆಲುವಾಗ ಕರೆಯೆ ಗೋಪಮ್ಮ ॥ ೧ ॥
ಕಾಲು ಕಾಲು ನಲಿವಾಗ–ಧ್ವನಿಪಾಲನಮ್ಮ ।
ಕೆರೆನೀರೊಳಗೆ ಬಿದ್ದು–ತೇಲಿಹೋದನಮ್ಮ ॥ ೨ ॥
ಬಾಲರ ಮುಂಡೆಗೆ ಹೆಟ್ಟೋದುಚಿತವೇನಮ್ಮ ।
ಕೋಲುಕೊಂಡು ಕೊಲ್ಲಹೋದರೆ ಓಡಿಹೋದನಮ್ಮ ॥ ೩ ॥

ಬಟ್ಟಲೊಳಗಿನ ಹಾಲು ಕುಡಿದಾತನಮ್ಮ ।
ಕಟ್ಟಿದ ಕರುಗಳ ಬಿಚ್ಚಿ ಬಿಟ್ಟುಹೋದನಮ್ಮ ॥ ೪ ॥
ಉಟ್ಟ ಸೀರೆಸೆಳೆವುದು ಉಚಿತವೇನಮ್ಮ ।
ದಿಟ್ಟತನ ಬೇಡೆಂದು ಹೇಳೆ ಗೋಪ್ಯಮ್ಮ ॥ ೫ ॥
ಹಾವಿನ ಹೆಗಲನೇಲೆ ಏರಿಬಂದನಮ್ಮ ।
ಹಾವಿನಲ್ಲಿ ನಿದ್ದೆಗೈವುದುಂಚಿತವೇನಮ್ಮ ॥ ೬ ॥
ಸಾವಿರಪೆಸರುಳ್ಳ ದೇವಕಣಮ್ಮ ।
ಭಾವಜ್ಞ ಕಾವೇರಿರಂಗ ಕಣಮ್ಮ ॥ ೭ ॥

ಸ.ಅ ೧ :-ಎಲೌ ಗೋಪಿದೇವಿ! ಕದ್ದು ಬೆಣ್ಣೆಯನ್ನು ತಿನ್ನುವಾಗ ಮುದ್ದು ಬಾಲಕೃಷ್ಣ-ನನ್ನು ಕರೆದು (ಬೇಡವೆಂದು) ಬುದ್ಧಿಯನ್ನು ಹೇಳಮ್ಮ.

೨ –(ಹಾಲನ್ನು ಗಟ-ಗಟನೆ ಕುಡಿವಾಗ ಉಂಟಾಗುವ ಶಬ್ದವು ಕೇಳಿಸದಂತೆ ಮಾಡಲು) ಹಜ್ಜೆಯ ಮೇಲೆ ಹಜ್ಜೆಯಿಕ್ಕಿ ನಲಿಯುತ್ತ (ಹಠಾತ್) ಯಾರಾದರೂ ಕಂಡು ಅಟ್ಟಿಸಿಕೊಂಡು ಬಂದಾಗ ಅವರುಗಳಿಗೆ ಸಿಕ್ಕದೆ ಓಡುತ್ತ ಸಮೀಪದಲ್ಲಿನ ಕೆರೆಗೆ (ಜಲಾಶಯಕ್ಕೆ) ಬಿದ್ದು ಈಜಿಕೊಂಡು ಹೋಗುವನಮ್ಮ.

೩ –ಹುಡುಗರ ತಲೆಗೆ ಚುಚ್ಚುವುದು ಯೋಗ್ಯಕೆಲಸವೆ? ಕೋಲು ಹಿಡಿದು ಹಿಂಬಾಲಿಸಿದರೆ ಓಡಿದನಮ್ಮ.

೪ –ಬಟ್ಟಲಲ್ಲಿದ್ದ ಹಾಲನ್ನೆಲ್ಲ ಕುಡಿದು, ಕಟ್ಟಿದ್ದ ಕರುಗಳನ್ನೆಲ್ಲ ಬಿಚ್ಚಿ ಓಡಿ ಹೋದನಮ್ಮ.

೫ –ಉಟ್ಟಿರುವ ಸೀರೆಯನ್ನು ಸೆಳೆಯುವುದು ಯೋಗ್ಯವೆ? ಇಂತಹ ಕೆಚ್ಚು ಬೇಡವೆನ್ನಮ್ಮ ಗೋಪಿ.

೬ –(ಕಾಳಿಂಗನೆಂಬ) ಹಾವಿನ ಹೆಗಲನ್ನೇರಿ ಬಂದನಮ್ಮ. ಹಾವಿನಮೇಲೆ ನಿದ್ರಿಸುವುದು ಯುಕ್ತವೇನಮ್ಮ?

೭ –ಆತನಿಗೆ ಸಾವಿರ ಹೆಸರುಗಳು. ಕಾವೇರಿನದಿಯ ನಡುವೆ ನೆಲೆಸಿರುವ (ನಡುಗಡ್ಡೆಯಲ್ಲಿರುವ) ಆ ರಂಗನು ಭಾವಜ್ಞನಮ್ಮ.

ವಿ. ವಿ:- ಮಂಡೆ= ತಲೆ, ಕೊಲ್ಲಹೋದರೆ = ಹೊಡೆಯಲು ಹೋದರೆ (ಅಟ್ಟಿಸಿಕೊಂಡು ಹೋದರೆ)

## ಸಂಕೀರ್ತನೆ-೯

ಪಲ್ಲ :- ಕೊಲ್ಲು ಬೇಗ ಕಳ್ಳರ ಶ್ರೀ–ನಲ್ಲ ಮುಧ್ವನಲ್ಲಭ ।
ಕೊಲ್ಲದಿದ್ದರೆ ನಿಲ್ಲಲವರು–ಕಲಿಯುಗದ ಕಳ್ಳರು ॥

ಚ. ೧ –ಎಲ್ಲಕೂಡಿ ನಿನ್ನ ಪೂಜೆಗೆ–ಕಲ್ಲು ಹಾಕುತಿದ್ದರು ಗಡ ।
ಬಲ್ಲಿನವರ ಕೊಲೆಗಾರರ–ಹಲ್ಲಕೀಳದೆ ನಿಲ್ಲರು ॥೧॥

೨ –ಒಳ್ಳೆಮಾತನಾಡಲವರು–ಕೋಲಾಹಲವ ಮಾಡಿ ಬೈವರು।
ಗೆಲುವ ಶಕ್ತಿ ಇಲ್ಲ ನಮಗೆ–ಬಲ್ಲೆ ನೀ ಮಧ್ವಗೊಲಿದನೆ ॥೨॥
೩ –ಕಳ್ಳತನವನೊಲ್ಲೆವೆಂಬರು–ಮುಳ್ಳುಮೊನೆಯಂತಿಹರು ।
ಚೆಲ್ವಹಯವದನನವರ–ಕೊಲ್ಲು ಕೊಲ್ಲು ನಮ್ಮಗೆಲಿಸು ॥೩॥

ಸೂ : ಈ ಕೃತಿಗೆ ಸಂಬಂಧಿಸಿದಂತೆ ಅಭಿಪ್ರಾಯವನ್ನು ಇದೇ ಪುಸ್ತಕದ ಎರಡನೆಯ ಭಾಗದ 'ಲಕ್ಷುಮಿನಾರಾಯಣ' ಜಯ-ಎಂಬ ಮೊದಲನೆಯ ಕೃತಿಯಲ್ಲೇ ಕೊಡಲಾಗಿದೆ.

## ಸಂಕೀರ್ತನೆ-೧೦

ಪಲ್ಲ. ದಿತಿಜರ ಜನಕೆ ದುರಂತಕೃತಾಂತ–ಗತಿ ನೀನೆ ನಮಗೆ ಗುಣವಂತ
ಹನುಮಂತ ॥

ಚ. ೧ –ಅಂಬುಧಿಯ ದಾಟಿ ಸೀತೆಯ ರೂಪಕಂಡೆ–ಕುಬುದ್ಧಿ ರಾವಣನ
ಪುರವ ಸೂರೆಗೊಂಡೆ ।
ವಿಬುಧರುತ್ಸಹವ ಮಾಡಿದ ಬಲುಗಂಡೆ–ಪ್ರಬುದ್ಧವೃಂದರ
ಪುಣ್ಯಫಲರಸ ಉಂಡೆ ॥೧॥
೨ –ಕೇಸರಿಯ ತನಯ ದಕ್ಷಿಣಕಾಗಿ ಬಂದೆ–ವಾರಿಧಿಬಂಧನಕೆ
ಬಲುಗಿರಿಗಳ ತಂದೆ ।
ಈಶರಘುಪತಿಸೇವೆಗೆ ಘನವಾಗಿ ನಿಂದೆ–ಅಸುರರಾವಣನ ಸರ್ವ
ಸೈನ್ಯವ ಕೊಂದೆ ॥೨॥
೩ –ಹಯವದನಕೃಪಾಪ್ರವಾಹವ ಪೊತ್ತೆ ಆ–ಪ್ರಿಯವಾದ
ಭವತರುವಿನ ಬೇರ ಕಿತ್ತೆ ।
ಭಯವ ಖಂಡಿಸಿ ಸಂತೋಷವ ನಮಗಿತ್ತೆ-ಜಯ-ಜಯ ಪ್ರಾಣಸುತ
ನಮೋನಮಸ್ತೇ ॥೩॥

ಸ. ಅ :- ಗುಣವಂತನಾದ ಹನುಮಂತನೆ, ದೈತ್ಯರಿಗೆ ಕೆಟ್ಟಪರಿಣಾಮುವನ್ನುಂಟು ಮಾಡುವುದರಲ್ಲಿ ಯಮಸ್ವರೂಪನೆ ನಮಗೆ ನೀನೆ ದಿಕ್ಕು.

ಚ. ೧ –ಸಮುದ್ರವನ್ನು ದಾಟಿ ಸೀತೆಯ ಆಕೃತಿಯನ್ನು ಕಂಡೆ, ದುಷ್ಟಬುದ್ಧಿಯ ರಾವಣನ ಪಟ್ಟಣವನ್ನು ಹಾಳುಮಾಡಿದೆ (ಸುಟ್ಟುಹಾಕಿದೆ). ದೇವತೆಗಳಿಗೆಲ್ಲ ಅತ್ಯಂತ ಸಂತೋಷವನ್ನು ಉಂಟುಮಾಡಿದ ಬಲುಪರಾಕ್ರಮಿಯೆ! ನೀನು ಅತ್ಯಂತ ಪ್ರೌಢರುಗಳು (ಪರಮ ಭಕ್ತರುಗಳು) ಅನುಭವಿಸಲು ಯೋಗ್ಯವಾದ ಪ್ರಯೋಜನವನ್ನು (ಶ್ರೀರಾಮನಿಂದ ಆಲಿಂಗನವನ್ನು) ಪಡೆದು ಸಂತೋಷಪಟ್ಟೆ.

೨ –ಕೇಸರಿ ಎಂಬ ಕಪಿನಾಯಕನ ಪುತ್ರನಾದ ನೀನು ದಕ್ಷಿಣಪ್ರಾಂತಕ್ಕೆ ಬಂದೆ; ಸಮುದ್ರವನ್ನು ಬಂಧಿಸಲು (ಸೇತುವೆ ಕಟ್ಟಲು) ಅನೇಕ ಬೆಟ್ಟ

